# ಮಹಾವೀರನ ಮಾತುಕತೆ



ಜಿ. ಪಿ. ರಾಜರತ್ನಂ

ಶಾಕ್ಯ ಸಾಹಿತ್ಯ ಮಂಟಪ
ಮಲ್ಲೇಶ್ವರ, ಬೆಂಗಳೂರು




ಆಚಾರ್ಯ
ಹೇಮಚಂದ್ರ
ರಾಜಾ
ಕುಮಾರಪಾಲ

*

*   *

Courtesy:
Sheth
Anandji
Kalianji

* ಓಂ *

* ನಮೊ ಸಮಣಸ್ಸ ಭಗವಟೊ ಮಹಾವೀರಸ್ಸ *

# ಮಹಾವೀರನ ಮಾತುಕತೆ

(ಶ್ವೇತಾಂಬರ ಸಿದ್ಧಾಂತದಿಂದ)

ಅನುವಾದಕ

ಜಿ. ಪಿ. ರಾಜರತ್ನಂ



“ನ ಸಧಮ್ಮ ಓಕ್ಕಸನಾ, ನ ಪರಧಮ್ಮ ವಮ್ಭನಾ”

‘ಸ್ವಧರ್ಮ ಹೊಗಳುವುದು ಇಲ್ಲ, ಪರಧರ್ಮ ತೆಗಳುವುದು ಇಲ್ಲ’

— ಮಜ್ಝಿಮನಿಕಾಯ —

ಶಾಕ್ಯ ಸಾಹಿತ್ಯ ಮಂಟಪ

ದೀಪಾವಳಿ. ೧೯೪೭] ಮಲ್ಲೇಶ್ವರ, ಬೆಂಗಳೂರು [ಬೆಲೆ: ರೂ ೧/೮

# SAYINGS OF MAHAVIRA

BEING

SELECT SPECIMENS

FROM

THE SVETAMBARA SIDDHANTA

IN

KANNADA

TRANSLATED AND COMPILED BY

G. P. RĀJA RATNAM, M. A.

(Editor: 'Buddha Vacana Madhu')

SĀKYA SĀHITYA MANTAPA

MALLESWARAM, BANGALORE, S. INDIA.

1937

## ಜಿ. ಪಿ. ರಾಜರತ್ನಂ ಅವರ ಬೌದ್ಧ ಗ್ರಂಥಗಳು

ಚೀನಾದೇಶದ ಬೌದ್ಧ ಯಾತ್ರಿಕರು
ಧರ್ಮದಾನಿ ಬುದ್ಧ (ಮುಗಿದಿವೆ)
ಗೌತಮ ಬುದ್ಧ (ಮುಗಿದಿವೆ)

ಬುದ್ಧವಚನ ಪರಿಚಯ
ಪಾಲಿ ಪಜ್ಜ ಪುಷ್ಪಾಂಜಲಿ
ಮೂರು ಪಾಲಿ ಸೂತ್ರಗಳು
ಮಿಲಿಂದ ಪ್ರಶ್ನೆ
ಬುದ್ಧನ ಕಾಲದ ತೀರ್ಥಕರೂ ತೀರ್ಥಕರರೂ
ಬುದ್ಧನ ಜಾತಕಗಳು (ಅಚ್ಚಿನಲ್ಲಿ)

## ಮೂರು ಜೈನ ಗ್ರಂಥಗಳು

ಮಹಾವೀರನ ಮಾತುಕತೆ (ಶ್ವೇತಾಂಬರ)
ಭಗವಾನ್ ಪಾರ್ಶ್ವನಾಥ (ಕ್ರಮಶಃ)
ಭಗವಾನ್ ಮಹಾವೀರ (ಕ್ರಮಶಃ)



# PREFACE

On this *Dipavali Day*, the Day LORD MAHAVIRA became a *Mukta*, I offer this volume of translations as a token of my regard for the Jain *Tirthamkaras* and Their Teachings.

This volume presents, for the first time in KANNADA garb, ten of the thirty-six lectures of the *Uttaradhyayana* delivered by Lord Mahavira before His *Nirvana*. It opens with the Life of the Lord, compiled from the *Sri Acaranga* and *Sri Kalpa Sutras;* and closes with the praise of Mahavira from the *Sri Sutrakritanga Sutra.*

I lay no special claim to a knowledge of Jaina *Prakrit* or its literature. An earnest desire to know more about *Nigantha Nataputta,* the senior contemporary of Lord Buddha, was responsible for my study of the "JAINA SUTRAS", Parts I and II (*S. B. E. Vols.* XXII & XLV), with their originals and commentaries. I have endeavoured to translate certain interesting and informative passages from these works of the Swetambara Siddhanta; and I trust that this new literature will be welcome to those interested in Jainism, and to those who may have neither the time nor the patience to plough through the whole texts.

The recent *'Tirthaka'* controversy brought me a personal contact with the well-known scholar Jaina Dharma Bhushana Brahmachari Sital Prasadji, Surat. He very kindly introduced me to certain important Digambara Texts. Under his directions, The Central Jain Publishing House, Lucknow and The Digambara Jain Pustakalaya, Surat, have given me a *Sastra-dana* of certain valuable books on Jainism. I am grateful to Brother Brahmachariji and the two Associations for their interest and help in my work. **I hope to make full use of those books in a future work dealing on the full length Life of Mahavira.**

These translations have been prepared with the aid of the following Texts and Translations:—

1. Sri Acaranga Sutram, with the commentary of Acarya Silanka. *(Agamodaya Samiti Edn.)*
2. Srimat Sutrakritangam, with the commentary of Acarya Silanka. *(Agamodaya Samiti Edn.)*

   [Lent by Mr. Ratilal D. Desai.]
3. Acaranga Sutram, Text with Hindi Translation by Bala Brahmacari Pandit Muni Sri Amolak Rishiji Maharaj. *(Jain Sastroddhar Edn.)*
4. Suyagadamga Sutiam, Text with Hindi Translation by same. *(Jain Sastroddhar Edn.)*

   [Lent by Mr. S. C. Anraj Jain.]
5. The Uttaradhyayana Sutra—Edited by Dr. Jarl Charpentier.
6. Jain Siddhanta Pathamala—by Pandit Muni Sri Saubhagya Candraji Maharaj—*(with Prakrit Text and Sanskrit Chaya: Sri Uttaradhyayana Etc., Etc.)*
7. Sri Uttaradhyayana Sutra—Hindi Translation by Pandit Muni Sri Saubhagya Chandraji Maharaj.
8. Sri Kalpasutra Mulapatha—Edited by Sravaka Bhima Simha Manek.
9. Jaina Sutras: Part I—*The Acaranga Sutra and the Kalpa Sutra*—Translated by H. Jacobi.
10. Jaina Sutras: Part II—*The Uttaradhyayana Sutra and the Sutrakritanga Sutra*—Translated by H. Jacobi.
11. The Kalpa Sutra and Nava Tattva—Rev. J. Stevenson.

I take this opportunity to express my heartfelt gratitude to Mr. Ratilal D. Desai, Manager, Sri Jaina Satya Prakashak Samiti, Ahmedabad and to Mr. S. C. Anraj Jain, Bangalore (Cantt.) for the loan of the two editions of the *Acaranga* and *Sutrakritanga Sutras*. For permission to reproduce in this book their copyright photographs and drawings, I am thankful to The Director, Archæological Survey of Mysore;

to the Managing Representatives, the Sheth Anandji Kalianji, Ahmedabad; and to Dr. O. C. Gangoly, Editor: '*Rupam*', Calcutta. I owe the decorations on this book to the courtesy of my friend Mr. M. V. Sitaramia, M. A.

Finally, I wish to thank the management and staff of the Dharma Prakash Press, Mangalore, for their prompt attention to and satisfactory execution of this work.

4—10—'37
Malleswaram P. O.
Bangalore.

**G. P. Rajaratnam.**

# ಚಿತ್ರ ಪರಿಚಯ

೧. ಆಚಾರ್ಯ ಹೇಮಚಂದ್ರ, ರಾಜಾ ಕುಮಾರಪಾಲ . . ಮುಖಚಿತ್ರ.

ಹೇಮಚಂದ್ರಾಚಾರ್ಯನು (1089 – 1172) ಪ್ರಸಿದ್ಧ ಕವಿ, ವಿದ್ವಾಂಸ. ಶ್ವೇತಾಂಬರ ಜೈನರು ಗುಜರಾತಿನಲ್ಲಿ ಬೀಡುಬಿಟ್ಟು ಬೆಳೆದುದೂ, ಹನ್ನೆರಡು ಹದಿಮೂರನೆ ಶತಮಾನಗಳಲ್ಲಿ ಜೈನಸಾಹಿತ್ಯ ಬೆಳಗಿದುದೂ ಈತನ ಪ್ರಭಾವದಿಂದ. ಈತನು ತನ್ನ ಜೈನಧರ್ಮವನ್ನು ಕುರಿತ ಗ್ರಂಥಗಳನ್ನು ಮಾತ್ರವಲ್ಲದೆ, ಇತರರಿಗೂ ಬೇಕಾದ ವ್ಯಾಕರಣ, ನಿಘಂಟು, ಅಲಂಕಾರ ಮುಂತಾದ ಶಾಸ್ತ್ರಗ್ರಂಥಗಳನ್ನೂ ರಚಿಸಿದನು. ಈತನು ಸಂಸ್ಕೃತ ಅಭ್ಯಾಸಕ್ಕೆ ಸಹಾಯನಾದುದಲ್ಲದೆ ಪ್ರಾಕೃತ ವ್ಯಾಸಂಗಕ್ಕೂ ನೆರವಾಗಿದ್ದಾನೆ. ಈತನು ತನ್ನ ಪಾಂಡಿತ್ಯದ ಅಪಾರತೆಯಿಂದ 'ಕಲಿಕಾಲ ಸರ್ವಜ್ಞ' ಎಂಬ ಬಿರುದು ಪಡೆದವನು.

ಇವನ ಪೋಷಕನಾದ ಜಯಸಿಂಹ ಸಿದ್ಧರಾಜನೆಂಬ (1094 – 1143) ಚಾಲುಕ್ಯ ರಾಜನು ಸರ್ವಮತ ಸಮದರ್ಶಿ, ಶಿವಭಕ್ತ. ಹೇಮಾಚಾರ್ಯನು ಅವನ ಆಸ್ಥಾನದಲ್ಲಿದ್ದು ಜೈನ ಬ್ರಾಹ್ಮಣ ಧರ್ಮಗಳಿಗಿರುವ ಸಾಮ್ಯತೆಗಳನ್ನು ಎತ್ತಿ ತೋರಿಸುತ್ತ ದೊರೆಯ ಒಲವನ್ನು ಸಂಪಾದಿಸಿದನು. ಸಿದ್ಧರಾಜನನಂತರ ಬಂದವನು ರಾಜಾ ಕುಮಾರಪಾಲ. ಇವನು ಮೊದಲು ಶೈವನಾಗಿದ್ದು ಅನಂತರ ಹೇಮಾಚಾರ್ಯನಿಂದ ಜಿನದೀಕ್ಷೆ ಪಡೆದನು. ಇವನ ಕಾಲದಲ್ಲಿ (1159) ಗುಜರಾತವು ಮಾದರಿಯ ಜೈನ ಸಂಸ್ಥಾನವಾಯಿತು.

೨. ದೇವೇಂದ್ರ ದೇವರಾಯ ಶಕ್ರ . . . . . ಇದಿರು ಪುಟ ೧೭.

ಪ್ರತಿ ತೀರ್ಥಕರನ ಪ್ರತಿ ಕಲ್ಯಾಣಕಾಲದಲ್ಲೂ ದೇವೇಂದ್ರನು ತನ್ನ ಪರಿವಾರದೊಡನೆ ಬಂದು, ಮಾಡಬೇಕಾದ ಕರ್ಮಗಳನ್ನು ಮಾಡಿಹೋಗುವುದು ಸಂಪ್ರದಾಯ. ಅಂತಹ ಕಲ್ಯಾಣ ಕಾಲವೊಂದರಲ್ಲಿ ಅಭಿಷೇಕಕ್ಕಾಗಿ ಕಲಶವನ್ನು ಹೊತ್ತು, ದೇವಲೋಕದ ನಟಗಾಯಕರೊಡನೆ, ಅಷ್ಟದಿಕ್ಪಾಲಕರೊಡನೆ ದೇವರಾಯನು ಬರುವುದನ್ನು ಈ ಚಿತ್ರ ಕಾಣಿಸುವುದು.

೩. ಮಹಾವೀರನ ನಿಷ್ಕ್ರಮಣ . . . . . ಇದಿರು ಪುಟ ೨೮.

ಭಗವಂತನು ಚಂದ್ರಪ್ರಭವೆಂಬ ಶಿಬಿಕೆಯಿಂದ ಇಳಿದು, ಲುಂಚಮಾಡಿಕೊಂಡಾಗ, ದೇವೇಂದ್ರನು ಆ ಕಿತ್ತ ಕೂದಲನ್ನು ಆತುಕೊಳ್ಳುವುದು.

೪. ಕೇವಲಿ ಮಹಾವೀರ . . . . . . . ಇದಿರು ಪುಟ ೩೯.

ಭಗವಂತನು ಶಾಲವೃಕ್ಷಗಳ ಬಳಿ ಕೇವಲಜ್ಞಾನ ಪಡೆದ ಚಿತ್ರ.

# ವಿವರ

## ತಿದ್ದುಪಡಿ

ಪುಟ ೯೯. ಪದ್ಯ ೨೧: ‘ವೇಣುದೇವ’ ಎಂಬುದಕ್ಕೆ ಬದಲು ‘ವೈನತೇಯ’ ಎಂದು ಓದಿರಿ.

ಪುಟ ೧೦೦. ಪದ್ಯ ೨೪: ‘ಧರ್ಮಗಳಲ್ಲಿ’ ಎಂಬುದನ್ನು ‘ಸರ್ವ ಧರ್ಮಗಳಲ್ಲಿ’ ಎಂದೂ, ‘ಜ್ಞಾನಿಗಳಲ್ಲಿ ಜ್ಞಾತ್ರಿಪುತ್ರನು ಪ್ರಧಾನ’ ಎಂಬುದನ್ನು ‘ಜ್ಞಾತ್ರಿಪುತ್ರನನ್ನು ಮೀರಿದ ಜ್ಞಾನಿ ಇಲ್ಲ’ ಎಂದೂ ಓದಿರಿ.

## ಪುಸ್ತಕ ಪರಿಚಯ

ಜೈನರಿಗೆ ಸಂಬಂಧಿಸಿದ ಈ ಕಾರ್ಯವನ್ನು ನಾನು ಕೈಕೊಂಡಿರುವುದು ನೋಡಿ, "ಯಾವೊಂದು ಕೆಲಸವನ್ನೂ ಪೂರ್ಣವಾಗಿ ಮುಗಿಸದೆ ಹತ್ತೂ ವಿಷಯಗಳಲ್ಲಿ ಇವನು ಅಲೆದಾಡುವನು" ಎಂದು ನನ್ನ ವಾಚಕರು ಹಲವರಿಗೆ ಬೇಸರವಾಗಬಹುದು. ಅದರಿಂದ, ಈ ಕಾರ್ಯದ ಪೂರ್ವಕಥೆಯನ್ನು ಹೇಳುವುದು ಆವಶ್ಯಕ.

ಭಗವಂತನಾದ ಬುದ್ಧದೇವನ ಹಿರಿಯ ಸಮಕಾಲೀನನಾಗಿದ್ದ ನಿಗಂಠ ನಾತಪುತ್ತನೆಂಬವನು ಪಾಲಿಗ್ರಂಥಗಳ ಪಾಠಕರಿಗೆಲ್ಲ ಪರಿಚಿತನಾದವನು. ಈ ನಿಗಂಠ ನಾತಪುತ್ತನೇ ಜೈನರ ಚರಮ ತೀರ್ಥಂಕರನಾದ ಭಗವಾನ್ ಮಹಾವೀರ ಸ್ವಾಮಿಯೆಂಬ ಸತ್ಯವನ್ನು ಸಕಲ ಪಂಡಿತರೂ ಒಪ್ಪಿರುವರು. ಬುದ್ಧನ ಸಮಕಾಲೀನನಾಗಿದ್ದ ಈ ಮಹಾವ್ಯಕ್ತಿಯನ್ನೂ ಕನ್ನಡದಲ್ಲಿ ಚಿತ್ರಿಸಬೇಕೆಂದು ಬಹುದಿನಗಳಿಂದ ಸಂಕಲ್ಪವುಂಟು. ಆದರೆ ನನ್ನ ಪಾಲಿ–ಕನ್ನಡ ಅನುವಾದಮಾಲೆಯು ನಡುವೆ ವಿರಾಮ ದೊರಕದೆ ಈ ಕೆಲಸ ಮಂದವಾಗಿ ಸಾಗುತ್ತಿತ್ತು.

ಈಗ ಆರೆಂಟು ತಿಂಗಳಿಂದ ನನ್ನ ಪಾಲಿ ಅನುವಾದಮಾಲೆಗೆ ಬಂದೊದಗಿರುವ ಅಪಘಾತವು ನನ್ನ ವಾಚಕರನೇಕರಿಗೆ ತಿಳಿದೇ ಇದೆ. ನನ್ನ ಹಳೆಯ ಪುಸ್ತಕವೊಂದರಲ್ಲಿ ಬಂದ 'ತೀರ್ಥಕ' ಶಬ್ದದಿಂದ ತೀರ್ಥಂಕರರಿಗೆ ಅಪಮಾನವಾಯಿತೆಂದು ಮೈಸೂರಿನಿಂದ ಉದ್ಭವಿಸಿದ ಅಪವಾದವು, ಅಖಿಲ ಭಾರತ ಜೈನಸಮಾಜಗಳ ಧರ್ಮಪ್ರಶ್ನೆಯಾಗಿ ಪರಿಣಮಿಸಿ, ನನ್ನ ಶಾಕ್ಯಸಾಹಿತ್ಯದ ಅನುವಾದ ಮಾಲೆಯನ್ನು ನಿಲ್ಲುವ ಸ್ಥಿತಿಗೆ ತಂದಿದೆ. ನನ್ನ ಪ್ರಯೋಗಕ್ಕೆ ಇರುವ ಪ್ರಮಾಣಗಳನ್ನೂ ಆ ಪ್ರಯೋಗದ ನಿಶ್ಚಿತಾರ್ಥವನ್ನೂ ಹಲವು ಜೈನ ವಿದ್ವಜ್ಜನರಿಗೆ ವಿವರಿಸಿ ಅವರನ್ನು ಸಮಾಧಾನಪಡಿಸಿದ ನಂತರ, (ಕಡೆಯಲ್ಲಿ 'Epilogue on the Tirthaka controversy' ನೋಡಿ) ಮೈಸೂರಿನಿಂದ '**राजरत्न कृत गौतमबुद्धके समाधान पर विचार**' ಎಂಬ ಹೊಸ ಲೇಖವು ಸೂರತ್ತಿನ 'ಜೈನ ಮಿತ್ರ', 26, ಗುರುವಾರ, ಆಗಸ್ಟಿನಲ್ಲಿ ಪ್ರಕಟವಾಗಿ ಪುನಃ ಕೋಲಾಹಲಮಾಡಿದೆ. ಆ ಲೇಖವು

"गत आषाढ सुदी ८ (ता. १९-७-३७) का जैनमित्र ३६ वां अंकमें बेंगलूरके मि. राजरत्नका एक पत्र प्रकट हुआ है। उसको पढकर कोई जैनी भाई भ्रममें न पड़ें इसलिये कुछ लिखना पडता है। मि. राजरत्न रामानुजमतावलंबी अर्थात् विशिष्टाद्वैत मतावलंबी—श्री वैष्णव ब्राह्मण हैं। ये महाशय कुछ समय सर्कारी स्कूलमें मास्टर थे वह उद्योग रिट्रेंचमेंटके वजहसे छूट गया। बाद उन्होंने "संपादक बुद्धवचन मधु" बनकर बौद्ध ग्रन्थोंको उलथा करनेका उद्योग शुरू किया। ये महाशय ही "गौतमबुद्ध" पुस्तकके लेखक हैं।"

ಎಂದು ಪ್ರಾರಂಭವಾಗಿ

"अफसोसकी बात है कि लेखकने माननीय ब्र०को भी यथार्थ विषय न कहकर झूटमूट कह दिया।"

ಎಂದು ಮುಂದುವರಿಸಿ,

"अत: हमें प्रार्थनापत्रोंका पीछा लेलेनेकी कोई आवश्यक्ता नहीं है और ऐसा करनेसे धर्मकी हानि होगी। * * * यह लेख इसलिये लिखा गया है कि मि० राजरत्नके मीठे २ वचनोंको सुनकर आप लोग सहसा अपना अभिप्राय उक्त पक्षमें मत दीजिये।"

ಎಂದು ಮುಗಿಯುತ್ತದೆ.

ಜೈನರಲ್ಲಿ ಜೈನರಿಂದ ಗಣ್ಯರಾಗಿರುವವರು ಜೈನೇತರನನ್ನು ಕುರಿತು ಈ ತೆರನಾಗಿ ನುಡಿಯುವಾಗ, ಜೈನರು ನನ್ನ ಮೇಲೆ ಮೈಸೂರು ಸರ್ಕಾರಕ್ಕೆ ಕಳುಹಿಸಿರುವ ಪ್ರತಿರೋಧವು ಹಿಂದಿರುಗುವುದು ಸುಲಭವಲ್ಲ. ಅದು ಹಿಂದಿರುಗದೆ ನನ್ನ ಬೌದ್ಧ ಸಾಹಿತ್ಯದ ಕೆಲಸ ಮುಂದುವರಿಯುವುದೂ (ಪ್ರಕಟಣೆಯ ದೃಷ್ಟಿಯಿಂದ) ಸುಲಭವಲ್ಲ.

ಬ್ರಹ್ಮಚಾರಿ ಶೀತಲಪ್ರಸಾದರಿಗೂ ಇತರ ಜೈನರಿಗೂ ನಾನು ವಿವರಿಸಿ ಸಮಾಧಾನಪಡಿಸಿದ ಪ್ರಮಾಣಗಳೂ ಕಾರಣಗಳೂ ಈ ಪುಸ್ತಕದ ಕಡೆಗೆ ಅಚ್ಚಾಗಿವೆ. ಬ್ರಹ್ಮಚಾರಿಗಳಿಗೆ ನಾನು ಸುಳ್ಳುಹೇಳಿದೆನೋ ಸತ್ಯಹೇಳಿದೆನೋ ಯಾರು ಬೇಕಾದರೂ ಪರೀಕ್ಷಿಸಬಹುದು. ಸಾಕ್ಷಿ ಅಲ್ಲಿದೆ.

ಇನ್ನು ಲೇಖನದ ಪ್ರಾರಂಭ. ನಾನು ರಾಮಾನುಜ ಮತಾವಲಂಬಿ ನಿಜ. ರಾಮಾನುಜ ಮತವು ವಿಶಿಷ್ಟಾದ್ವೈತವೆಂಬುದೂ ನಿಜ. ಆದರೆ ನಾನು ಎಂದೂ ಸರ್ಕಾರಿ ಕೆಲಸದಲ್ಲಿದ್ದುದೂ ಇಲ್ಲ, ರಿಟ್ರೆಂಚ್‌ಮೆಂಟಿನಲ್ಲಿ

ಕೆಲಸ ಕಳೆದುಕೊಂಡುದೂ ಇಲ್ಲ. ನಾನು ಬೌದ್ಧಸಾಹಿತ್ಯದ ಕಾರ್ಯಕ್ಕೆ ಇಳಿದುದು 'ಶಿಶುವಿಹಾರ'ವನ್ನು ಬಿಟ್ಟ ಎರಡು ವರುಷದ ಮೇಲೆ. ಬೌದ್ಧ ಗ್ರಂಥಗಳನ್ನು ನಾನು 'ಉಲ್ಥಾ' ಮಾಡುತ್ತಿರುವೆನೆಂದು ಓದಿದವರು ಯಾರೂ ಈ ವರೆಗೆ ಹೇಳಿದುದಿಲ್ಲ. ಆದರೆ, ಓದದ ಕೆಲವರಿಗೆ ಓದಿದಂತೆ ತೋರಿಸಿ ಕೊಳ್ಳುವ ಚಪಲ ವಿಪರೀತ, ಸಹಜ.

ಇದೆಲ್ಲ ಹೇಗೂ ಇರಲಿ. ರಾಮಾನುಜ ಮತಾವಲಂಬಿ ಶ್ರೀವೈಷ್ಣವ ನಾದ ನಾನು, ಬೌದ್ಧಗ್ರಂಥಗಳನ್ನು ಅನುವಾದಿಸಲು ಉದ್ಯೋಗಿ ಸಿರುವ ನಾನು, (ತೀರ್ಥಕ ಶಬ್ದದಿಂದ ತೀರ್ಥಂಕರರನ್ನು ಹೀಯಾಳಿಸಿರುವು ದೆಂಬ ಅಪವಾದಕ್ಕೆ ಪಕ್ಕಾದ) "ಗೌತಮ ಬುದ್ಧ"ದ ಲೇಖಕನು ಎಂಬ ಈ ಕೊಂಕುನುಡಿಯ ಪರಿಚಯದ ಹಿನ್ನೆಲೆಯಾಗಿ ನಿಂತಿರುವ ಹೃದಯವನ್ನು ಹುಡುಕುವುದು ಬೇಡ. ಅದಕ್ಕೆ ಈ ಪ್ರಕೃತದ ಪುಸ್ತಕವೆ ಸಾಕಷ್ಟು ಉತ್ತರ. ಜೈನ ತೀರ್ಥಂಕರರಿಗೂ ಅವರ ಲೋಕಕಲ್ಯಾಣದ ಬೋಧೆಗೂ ನನಗಿರುವ ಗೌರವದ ಗುರುತಾಗಿ ನನ್ನ ಶಕ್ತಿಗೆ ಎಟುಕಿದ ಈ ಸ್ವಲ್ಪ ಪುಷ್ಪಕಗಳನ್ನು ಭಕ್ತಿಯಿಂದ ಅರ್ಪಿಸುತ್ತೇನೆ.

* * * *

ಮಹಾವೀರನ ಪೂರ್ಣ ಜೀವನವನ್ನು ಕನ್ನಡದಲ್ಲಿ ಬರೆಯಲು ತೊಡಗಿ ದ್ದೇನೆ. ಅದರಲ್ಲಿ ದಿಗಂಬರ, ಶ್ವೇತಾಂಬರ, ಸ್ಥಾನಕವಾಸಿ, ಬೌದ್ಧ—ಎಂದು ಎಲ್ಲ ಕಡೆಗಳಿಂದಲೂ ವಿಷಯವನ್ನು ಸಂಗ್ರಹಿಸುತ್ತಿದ್ದೇನೆ. ಈಗ, **ಅಕಾರಣ ವಾಗಿ ಎದ್ದ ಈ ಅಪಪ್ರಚಾರವನ್ನು ಎದುರಿಸುವುದಕ್ಕಾಗಿ ಈ ಏಕದೇಶ ವನ್ನು ಮಾತ್ರ ಸದ್ಯಕ್ಕೆ ಪ್ರಕಟಿಸಿದ್ದೇನೆ. ಇಲ್ಲಿ ಕೊಟ್ಟಿರುವ ಸಾಹಿತ್ಯವೆಲ್ಲ ಶ್ವೇತಾಂಬರ ಸಿದ್ಧಾಂತದಿಂದ ಆಯ್ದುವು.** ಅದು ಕೂಡ ಶ್ರೀ ಆಚಾರಾಂಗ, ಶ್ರೀ ಸೂತ್ರಕೃತಾಂಗ, ಶ್ರೀ ಉತ್ತರಾಧ್ಯಯನ ಮತ್ತು ಶ್ರೀ ಕಲ್ಪಸೂತ್ರ ಎಂಬ ನಾಲ್ಕೇ ಗ್ರಂಥಗಳನ್ನು ಬಳಸಿಕೊಂಡುದು.

ಮೊದಲು ಕೊಟ್ಟಿರುವ ಮಹಾವೀರನ ಚರಿತ್ರವು ಆಚಾರಾಂಗ ಮತ್ತು ಕಲ್ಪಸೂತ್ರಗಳಿಂದ ಆಯ್ದುದು. **ಇಲ್ಲಿ ಕಾಣುವ ಚರಿತ್ರಕ್ಕೂ ದಿಗಂಬರರು ಚಿತ್ರಿಸುವ ಚರಿತ್ರಕ್ಕೂ ಹಲವು ವ್ಯತ್ಯಾಸ ಉಂಟು.** ಪ್ರಕೃತವಲ್ಲವಾದುದರಿಂದ ಇಲ್ಲಿ ಅವುಗಳನ್ನು ಸೂಚಿಸಿಲ್ಲ. ನನ್ನ ಮುಂದಿನ "ಮಹಾವೀರ"ದಲ್ಲಿ ವಿವರಿಸಲಾಗುವುದು.

ಭಗವಂತನು ತನ್ನ ಮಹಾಮರಣಮಹೋತ್ಸವದ ಪೂರ್ವದಲ್ಲಿ ಆಡಿದ ಮಾತುಗಳೆಂದು 'ಶ್ರೀ ಉತ್ತರಾಧ್ಯಯನ'ವನ್ನು ಬಹು ಮುಖ್ಯವೆಂದೆಣಿಸ

ಲಾಗಿದೆ. ಸಾಹಿತ್ಯದೃಷ್ಟಿಯಿಂದಲೂ ಸುಂದರ ಮತ್ತು ಯೋಗ್ಯವೆಂದೆಣಿಸ ಲಾಗುವ ಹತ್ತು ಅಧ್ಯಯನಗಳನ್ನು ಮಾತ್ರ ಇಲ್ಲಿ ಮುಂದೆ ಕನ್ನಡಿಸಲಾಗಿದೆ.

ಕಡೆಗೆ, ಶ್ರೀ ಸೂತ್ರಕೃತಾಂಗದಿಂದ ತೆಗೆದ 'ಶ್ರೀ ವೀರ ಸ್ತುತಿ'ಯಿಂದ ಸಂಕಲನವು ಮುಗಿಯುವುದು.

* * * *

ಅನುವಾದ ಮಾಡುವಾಗ ಅನೇಕ ಕಡೆ ಅನುಕೂಲಕ್ಕಾಗಿ, ಭಾವ ಬಂಧ ಗೌರವಕ್ಕಾಗಿ, ಮೂಲದ ಯಥಾರ್ಥ ಪ್ರತಿಬಿಂಬಕ್ಕಾಗಿ ಅನೇಕ ಪಾರಿಭಾಷಿಕ ಪದಗಳನ್ನು ಹಾಗೆಯೇ ಬಳಸಿಕೊಂಡಿದ್ದೇನೆ. ಅವುಗಳ ನ್ನೆಲ್ಲ, ಪುಸ್ತಕದ ಕಡೆಯ ಕೋಷ ಅನುಬಂಧಗಳಲ್ಲಿ ಸಾಕಷ್ಟು ವಿವರಿಸಿ ದ್ದೇನೆ.

ಆದಷ್ಟು ಅಪ್ರಮಾದದಿಂದ ಈ ಕೆಲಸ ನಡೆಸಿದ್ದೇನೆ. ಹಾಗೂ ನನಗೇ ಅರಿವಾಗದ ಪ್ರಮಾದದಿಂದ ಏನಾದರೂ ನ್ಯೂನತೆಗಳು ಉಳಿದು ಕೊಂಡಿರುವಲ್ಲಿ, ವಿದ್ವಜ್ಜನರ ಹೃದಯವೈಶಾಲ್ಯವು ನನ್ನನ್ನು ತಟಹಾಯಿಸಲಿ; ಅವರ ಅನುಕಂಪವು ಈ ಕೃತಿಯನ್ನು ಕಾಪಾಡಲಿ.

ದೀಪಾವಳಿ, ೧೯೩೭
ಮಲ್ಲೇಶ್ವರ, ಬೆಂಗಳೂರು

ಜಿ. ಪಿ. ರಾಜರತ್ನಂ



ದೇವೇಂದ್ರ ದೇವರಾಯ ಶಕ್ರ

* ಓಂ *

* ನಮೊ ಸಮಣಸ್ಸ ಭಗವಓ ಮಹಾವೀರಸ್ಸ *

# ಭಗವಂತ ಶ್ರಮಣ ಮಹಾವೀರ

ಬುದ್ಧಸ್ತ್ವಮೇವ ವಿಬುಧಾರ್ಚಿತ ಬುದ್ಧಿಬೋಧಾತ್ ।
ತ್ವಂ ಶಂಕರೋಽಸಿ ಭುವನತ್ರಯ ಶಂಕರತ್ವಾತ್ ॥
ಧಾತಾಸಿ ಧೀರ ಶಿವಮಾರ್ಗವಿಧೇರ್ವಿಧಾನಾತ್ ।
ವ್ಯಕ್ತಂ ತ್ವಮೇವ ಭಗವನ್ ಪುರುಷೋತ್ತಮೋಽಸಿ ॥

— ಭಕ್ತಾಮರ ಸ್ತೋತ್ರ, ೨೫.

ಕೆಳಗೆ ಕೊಟ್ಟಿರುವ

**'ಭಗವಂತ ಶ್ರಮಣ ಮಹಾವೀರ'**

ಎಂಬ ಚರಿತ್ರವು

**ಶ್ರೀ ಆಚಾರಾಂಗ ಸೂತ್ರ**

ಮತ್ತು

**ಶ್ರೀ ಕಲ್ಪಸೂತ್ರ**

ಎಂಬ

**ಜೈನರ ಎರಡು ಪವಿತ್ರ ಗ್ರಂಥಗಳ ಮುಖ್ಯ ಸ್ಥಾನಗಳಿಂದ**

ಅನುವಾದಮಾಡಿ ಬರೆದುದು.

## ಮಂಗಲಾಚಾರ

ಅರ್ಹಂತರಿಗೆ ನಮನ!
ಸಿದ್ಧರಿಗೆ ನಮನ!
ಆಚಾರ್ಯರಿಗೆ ನಮನ!
ಉಪಾಧ್ಯಾಯರಿಗೆ ನಮನ!
ಲೋಕದ ಸರ್ವಸಾಧುಗಳಿಗೆ ನಮನ!

ಸರ್ವಪಾಪಗಳನ್ನೂ ನಾಶಮಾಡತಕ್ಕ ಈ ಪಂಚನಮಸ್ಕಾರವು ಸರ್ವ ಮಂಗಲಗಳಲ್ಲಿ ಮೊದಲ ಮಂಗಲವು.

—[ಕಲ್ಪಸೂತ್ರ: 1, 1.]

* * * *

ಅರ್ಹಂತರಿಗೆ, ಭಗವಂತರಿಗೆ, ಆದಿಕರರಿಗೆ, ತೀರ್ಥಂಕರರಿಗೆ, ಸಮ್ಯಕ್ ಸಂಬುದ್ಧರಿಗೆ;

ಪುರುಷೋತ್ತಮರಿಗೆ, ಪುರುಷಸಿಂಹರಿಗೆ, ಪುರುಷವರಪುಂಡರೀಕರಿಗೆ, ಪುರುಷವರಗಂಧಹಸ್ತಿಗಳಿಗೆ;

ಲೋಕೋತ್ತಮರಿಗೆ, ಲೋಕನಾಥರಿಗೆ, ಲೋಕಹಿತರಿಗೆ, ಲೋಕ ಪ್ರದೀಪರಿಗೆ, ಲೋಕಪ್ರದ್ಯೋತಕರರಿಗೆ;

ಅಭಯದಾತರಿಗೆ, ಚಕ್ಷುದಾತರಿಗೆ, ಮಾರ್ಗದಾಯಕರಿಗೆ, ಶರಣ ದಾಯಕರಿಗೆ, ಜೀವದಾಯಕರಿಗೆ, ಬೋಧಿದಾಯಕರಿಗೆ;

ಧರ್ಮದಾಯಕರಿಗೆ, ಧರ್ಮದೇಶಕರಿಗೆ, ಧರ್ಮನಾಯಕರಿಗೆ, ಧರ್ಮಸಾರಥಿಗಳಿಗೆ, ಧರ್ಮ ವರ ಚಾತುರಂತ ಚಕ್ರವರ್ತಿಗಳಿಗೆ;

ದ್ವೀಪ[1]ಗಳಿಗೆ, ತ್ರಾಣಗಳಿಗೆ, ಶರಣಗಳಿಗೆ, ಆಸರೆಗಳಿಗೆ, ಆಧಾರ ಗಳಿಗೆ;

ಅಪ್ರತಿಹತವಾದ ವರ ಜ್ಞಾನ ದರ್ಶನಧಾರಿಗಳಿಗೆ, ಅಧರ್ಮವನ್ನು ಬಿಸುಟವರಿಗೆ;

ಜಿನರಿಗೆ, ಜಯದಾತರಿಗೆ, ತೀರ್ಣ[2]ರಿಗೆ, ತಾರಕರಿಗೆ, ಬುದ್ಧರಿಗೆ, ಬೋಧಕರಿಗೆ, ಮುಕ್ತರಿಗ, ಮೋಚಕರಿಗೆ, ಸರ್ವಜ್ಞರಿಗೆ, ಸರ್ವದರ್ಶಿಗಳಿಗೆ;

1. ಸಂಸಾರ ಸಾಗರದ ಅಲೆಗಳಿಂದ ಪಾರಾಗುವ ದ್ವೀಪ.

2. ಸಂಸಾರವನ್ನು ದಾಟಿದವರು.

ಶಿವವೂ ಅಚಲವೂ ಅಕಲಂಕವೂ ಅನಂತವೂ ಅಕ್ಷಯವೂ ಅವ್ಯಾಬಾಧವೂ ಅಪುನರಾವರ್ತಿತವೂ[1] ಆದ ಸಿದ್ಧಿಗತಿಯೆಂಬ ಹೆಸರಿನ ಸ್ಥಾನವನ್ನು ಪಡೆದವರಿಗೆ ನಮಸ್ಕಾರ.

ಭಯವನ್ನು ಜಯಿಸಿದ ಜಿನರಿಗೆ ನಮಸ್ಕಾರ.

ಭಗವಂತನಾದ ಶ್ರಮಣ ಮಹಾವೀರನಿಗೆ, ಆದಿಕರನಿಗೆ, ಚರಮ ತೀರ್ಥಕರ[2]ನಿಗೆ, ಪೂರ್ವ ತೀರ್ಥಕರರಿಂದ ನಿರ್ದಿಷ್ಟನಾದವನಿಗೆ ನಮಸ್ಕಾರ.

— [ಕಲ್ಪಸೂತ್ರ: 2. 16.]

---

1. ಸಿದ್ಧಿಗತಿಗೆ ಹೋದವರು ಪುನಃ ಸಂಸಾರಕ್ಕೆ ಹಿಂದಿರುಗುವುದಿಲ್ಲ.
2. ಈ ಅವಸರ್ಪಿಣಿಯ 24 ತೀರ್ಥಂಕರರಲ್ಲಿ ಮಹಾವೀರನು ಕಡೆಯವನು.

## ಕಲ್ಯಾಣಗಳು

ಆ ಕಾಲದಲ್ಲಿ, ಆ ಸಮಯದಲ್ಲಿ, ಐದು ಹಸ್ತೋತ್ತರಗಳ[ಲ್ಲಿ ತನ್ನ ಕಲ್ಯಾಣಗಳು ನಡೆದ] ಭಗವಂತನಾದ ಶ್ರಮಣ ಮಹಾವೀರನಿದ್ದನು. ಆತನು ಉತ್ತರಫಲ್ಗುಣೀ ನಕ್ಷತ್ರಯೋಗದಲ್ಲಿ ಅವತರಿಸಿ [ದೇವನಂದೆಯ] ಗರ್ಭವನ್ನು ಹೊಕ್ಕನು; ಉತ್ತರಫಲ್ಗುಣಿಯಲ್ಲಿ [ದೇವನಂದೆಯ] ಗರ್ಭದಿಂದ [ತ್ರಿಶಲೆಯ] ಗರ್ಭಕ್ಕೆ ಒಯ್ಯಲ್ಪಟ್ಟನು; ಉತ್ತರಫಲ್ಗುಣಿಯಲ್ಲಿ ಹುಟ್ಟಿದನು; ಉತ್ತರಫಲ್ಗುಣೀ ಯೋಗದಲ್ಲಿ ತಲೆಗೂದಲು ಕಿತ್ತು, ಮನೆ ಬಿಟ್ಟು, ಮನೆಯಿಲ್ಲದವನಾದನು; ಉತ್ತರಫಲ್ಗುಣೀ ಯೋಗದಲ್ಲಿ ಕೃತ್ಸ್ನವೂ ಪರಿಪೂರ್ಣವೂ ತಡೆಯಿಲ್ಲದೆ ನಿರಾವರಣವೂ ಅನಂತವೂ ಆದ ಕೇವಲವೆಂಬ ಶ್ರೇಷ್ಠವಾದ ಜ್ಞಾನದರ್ಶನಗಳನ್ನು ಪಡೆದನು. ಭಗವಂತನು ಸ್ವಾತಿಯಲ್ಲಿ ಪರಿನಿರ್ವಾಣ ಪಡೆದನು.

—[ಆಚಾರಾಂಗ: II; 15; § 1.]

## ಗರ್ಭಾವತರಣ

ಈ ಅವಸರ್ಪಿಣಿಯಲ್ಲಿ; ಸುಷಮಸುಷಮ ಕಳೆದು, ಸುಷಮ ಕಳೆದು, ಸುಷಮದುಃಷಮ ಕಳೆದು, ದುಃಷಮಸುಷಮದ ಬಹುಭಾಗ ಕಳೆದು ಎಪ್ಪತ್ತೈದು ವರುಷ ಒಂಬತ್ತೂವರೆ ತಿಂಗಳು ಉಳಿದಿರುವಾಗ; ಗ್ರೀಷ್ಮದ ನಾಲ್ಕನೆಯ ತಿಂಗಳಲ್ಲಿ, ಎಂಟನೆಯ ಪಕ್ಷದಲ್ಲಿ, ಆಷಾಢ ಶುದ್ಧದ ಆರನೆಯ ದಿನ, ಉತ್ತರಫಲ್ಗುಣೀ ನಕ್ಷತ್ರಯೋಗದಲ್ಲಿ ಭಗವಂತ ಶ್ರಮಣ ಮಹಾವೀರನು ಮಹಾವಿಜಯ ಸಿದ್ಧಾರ್ಥ ಪುಷ್ಪೋತ್ತರವೆಂಬ ಮಹಾವಿಮಾನ[1]ದಿಂದ ಅವತರಿಸಿದನು. [ಆ ವಿಮಾನವು ಪುಷ್ಪಗಳಲ್ಲಿ] ಶ್ರೇಷ್ಠವಾದ ಪುಂಡರೀಕದಂತಹುದು, ದಿಕ್ಕುಗಳಲ್ಲಿ ಸ್ವಸ್ತಿಕ ವರ್ಧಮಾನಕಗಳಂತಹದು. ಭಗವಂತನು ತನ್ನ ಆಯುಸ್ಸು, ಸ್ಥಿತಿ, ಭವಗಳು ಮುಗಿಯುವವರೆಗೆ ಇಪ್ಪತ್ತು ಸಾಗರೋಪಮ ಕಾಲ ಅಲ್ಲಿ ವಾಸಿಸಿದ್ದನು.

[ಭಗವಂತನು ಅವತರಿಸಿ,] ಇಲ್ಲಿ, ಜಂಬೂದ್ವೀಪವೆಂಬ ದ್ವೀಪದಲ್ಲಿ, ಭಾರತವರ್ಷದಲ್ಲಿ, ದಕ್ಷಿಣಾರ್ಧ ಭಾರತದಲ್ಲಿ, ದಕ್ಷಿಣ ಬ್ರಾಹ್ಮಣ ಕುಂಡಪುರ ಸನ್ನಿವೇಶದಲ್ಲಿ, ವೃಷಭದತ್ತನೆಂಬ ಕೋಡಲಗೋತ್ರದ ಬ್ರಾಹ್ಮಣನ ಹೆಂಡತಿಯಾದ ದೇವನಂದೆಯೆಂಬ ಜಾಲಂಧರಾಯಣ ಗೋತ್ರದ ಬ್ರಾಹ್ಮಣಿಯ ಬಸಿರನ್ನು ಸಿಂಹದ ರೂಪಿನಲ್ಲಿ ಹೊಕ್ಕನು.

[ಆಗ] ಭಗವಂತನ ಜ್ಞಾನ ಮೂರು ತೆರನಾಗಿತ್ತು. ತಾನು ಅವತರಿಸುವೆನೆಂಬುದನ್ನು ಅವನು ತಿಳಿದನು. ತಾನು ಅವತರಿಸಿದೆನೆಂಬುದನ್ನು ತಿಳಿದನು. ತಾನು ಅವತರಿಸುತ್ತಿದ್ದುದನ್ನು ತಿಳಿಯಲಿಲ್ಲ; ಆ ಕಾಲ ಸೂಕ್ಷ್ಮವೆಂದೆಣಿಸಲಾಗಿದೆ.

– [ಆಚಾರಾಂಗ: II, 15; § 2–3.]

---

1. ದೇವತೆಗಳ ನಿವಾಸ.

## ಗರ್ಭಾಪಹರಣ

ಆಗ, ವರ್ಷಾಕಾಲದ ಮೂರನೆಯ ಮಾಸದಲ್ಲಿ, ಐದನೆಯ ಪಕ್ಷದಲ್ಲಿ, ಅಶ್ವಿನಿ ಬಹುಳದ ಹದಿಮೂರನೆಯ ದಿನ, ಉತ್ತರಫಲ್ಗುಣೀ ನಕ್ಷತ್ರಯೋಗದಲ್ಲಿ, ಎಂಬತ್ತೆರಡು ದಿನ ಕಳೆದು ಎಂಬತ್ತಮೂರನೆಯ ದಿನದಂದು, ಹಿತಾನುಕಂಪಿಯಾದ ದೇವ[1]ನು ಸಂಪ್ರದಾಯ[2]ವನ್ನು ಗಮನಿಸಿ, [ಗರ್ಭದಲ್ಲಿಯ] ಅಶುಭವಾದ ಪುದ್ಗಲವನ್ನು ಬಿಟ್ಟು ಶುಭವಾದ ಪುದ್ಗಲಗಳನ್ನು ಸ್ವೀಕರಿಸಿ, ಭಗವಂತ ಶ್ರಮಣ ಮಹಾವೀರನ ಗರ್ಭವನ್ನು ದಕ್ಷಿಣ ಬ್ರಾಹ್ಮಣ ಕುಂಡಪುರ ನಿವೇಶದಿಂದ ಉತ್ತರ ಕ್ಷತ್ರಿಯ ಕುಂಡಪುರ ನಿವೇಶದ ಜ್ಞಾತ್ರಿಕ್ಷತ್ರಿಯರ ಕಾಶ್ಯಪ ಗೋತ್ರದ ಕ್ಷತ್ರಿಯ ಸಿದ್ಧಾರ್ಥನ ಹೆಂಡತಿಯಾದ ವಾಸಿಷ್ಠ ಗೋತ್ರದ ಕ್ಷತ್ರಿಯಾಣಿ ತ್ರಿಶಲೆಯ ಬಸಿರಲ್ಲಿ ತಂದಿರಿಸಿ, ಆ ಕ್ಷತ್ರಿಯಾಣಿ ತ್ರಿಶಲೆಯ ಬಸಿರಿನ ಗರ್ಭವನ್ನು ಬ್ರಾಹ್ಮಣಿ ದೇವನಂದೆಯ ಬಸಿರಲ್ಲಿ ತಂದಿಟ್ಟನು.

[ಆಗ] ಭಗವಂತನ ಜ್ಞಾನ ಮೂರು ತೆರನಾಗಿತ್ತು. ತಾನು ಅಪಹೃತನಾಗುವೆನೆಂಬುದನ್ನೂ, ತಾನು ಅಪಹೃತನಾದುದನ್ನೂ, ತಾನು ಅಪಹೃತನಾಗುತ್ತಿರುವುದನ್ನೂ ಆತನು ತಿಳಿದಿದ್ದನು.

—[ಆಚಾರಾಂಗ: II, 15; § 4—5.]

1. ದೇವೇಂದ್ರ.
2. ತೀರ್ಥಂಕರರು ಕ್ಷತ್ರಿಯ ಕುಲದಲ್ಲಿಯೇ ಅವತರಿಸಬೇಕೆಂಬ ಸಂಪ್ರದಾಯ.

## ಭಗವಂತನ ಜನನ

ಆ ಕಾಲದಲ್ಲಿ, ಆ ಸಮಯದಲ್ಲಿ, ಒಂದು ಸಲ, ಒಂಬತ್ತು ತಿಂಗಳು ತುಂಬಿ ಏಳೂವರೆ ದಿನಗಳನಂತರ, ಗ್ರೀಷ್ಮದ ಮೊದಲ ಮಾಸದಲ್ಲಿ, ಎರಡನೆಯ ಪಕ್ಷದಲ್ಲಿ, ಚೈತ್ರ ಶುದ್ಧದ ಹದಿಮೂರನೆಯ ದಿವಸ, ಉತ್ತರ ಫಲ್ಗುಣೀ ನಕ್ಷತ್ರಯೋಗದಲ್ಲಿ, ಕ್ಷತ್ರಿಯಾಣಿ ತ್ರಿಶಲೆಯು ತಾನೂ ಆರೋಗ್ಯವಂತೆಯಾಗಿ ಭಗವಂತನಾದ ಶ್ರಮಣ ಮಹಾವೀರನನ್ನು ಆರೋಗ್ಯವಾಗಿ ಹೆತ್ತಳು.

ಆ ರಾತ್ರೆ ಭವನಪತಿ, ವ್ಯಂತರ, ಜ್ಯೋತಿಷ್ಕ ಮತ್ತು ವಿಮಾನವಾಸಿಗಳೆಂಬ ದೇವದೇವಿಯರು ಬಂದು ಹೋಗುವುದರಿಂದ ದೊಡ್ಡ ಪ್ರಕಾಶವಾಯಿತು, ದೊಡ್ಡ ಕೋಲಾಹಲವಾಯಿತು. ಆ ರಾತ್ರೆ ದೇವದೇವಿಯರು ಅಮೃತ, ಗಂಧ, ಚೂರ್ಣ, ಪುಷ್ಪ, ಚಿನ್ನ, ರತ್ನಗಳನ್ನು ಮಳೆಗರೆದರು. ದೇವದೇವಿಯರು ಆ ರಾತ್ರೆ ಭಗವಂತನಿಗೆ ಸೂತಿಕರ್ಮಗಳನ್ನೂ ತೀರ್ಥಕರಾಭಿಷೇಕವನ್ನೂ ನಡೆಸಿದರು.

ಭಗವಂತನು ತ್ರಿಶಲೆಯ ಗರ್ಭಕ್ಕೆ ಬಂದಂದಿನಿಂದ ಆ (ಜ್ಞಾತ್ರಿ) ಕುಲದ ಚಿನ್ನ, ಬೆಳ್ಳಿ, ಧನ, ಧಾನ್ಯ, ಮಣಿ, ಮುತ್ತು, ಶಂಖ, ಶಿಲೆ, ಹವಳಗಳು ಅತಿ ಅತಿಯಾಗಿ ವರ್ಧಿಸಿತು. ಭಗವಂತನ ತಾಯಿತಂದೆಯರು ಇದನ್ನು ತಿಳಿದು, ಹುಟ್ಟಿದ ಹತ್ತು ದಿನದ ಮೇಲೆ, ಬೇಕಾದಷ್ಟು ಶುಚಿಯಾದ ಅನ್ನಪಾನಗಳನ್ನು ಸಿದ್ಧಗೊಳಿಸಿ, ಮಿತ್ರರನ್ನೂ ಜ್ಞಾತಿಗಳನ್ನೂ ಸಂಬಂಧವರ್ಗವನ್ನೂ ಕರೆದು ಉಣಿಸಿ, ಶ್ರಮಣ ಬ್ರಾಹ್ಮಣರಿಗೂ ದೀನ ಅನಾಥರಿಗೂ ದಾನಮಾಡಿ, "[ಈ ಮಗು] ಗರ್ಭದಲ್ಲಿ ಬಂದಂದಿನಿಂದ ನಮ್ಮ ಕುಲದ ಸಂಪತ್ತು ವರ್ಧಿಸುತ್ತಿರುವುದರಿಂದ [ಈ] ಕುಮಾರನ ಹೆಸರು ವರ್ಧಮಾನ" ಎಂದರು.

—[ಆಚಾರಾಂಗ: II, 15; § 6—12.]

## ಭಗವಂತನ ವರ್ಧನ

ಭಗವಂತನಿಗೆ ಹಾಲಿನ ದಾದಿ, ಸ್ನಾನದ ದಾದಿ, ಅಲಂಕರಿಸುವ ದಾದಿ, ಆಟದ ದಾದಿ, ಎತ್ತಿಕೊಳ್ಳುವ ದಾದಿ ಎಂದು ಐವರು ದಾದಿಯರಿದ್ದರು. ಹೀಗೆ ತೊಡೆಯಿಂದ ತೊಡೆಗೆ ಹೋಗುತ್ತ, ಭಗವಂತನು, ಗಿರಿಕಂದರದಲ್ಲಿ ಬೆಳೆವ ಚಂಪಕಪಾದಪದಂತೆ, ರಮ್ಯವಾದ ಮಣಿಕುಟ್ಟಿಮತಲದಲ್ಲಿ ಕ್ರಮವಾಗಿ ಬೆಳೆದನು.

ಭಗವಂತನು, ವಿಜ್ಞಾನ ಬಲಿತನಂತರ, ಬಾಲಭಾವ ಕಳೆದ ಬಳಿಕ, ಶಬ್ದ ಸ್ಪರ್ಶ ರಸ ರೂಪ ಗಂಧಗಳೆಂಬ ಪಂಚಲಕ್ಷಣದ ಮಿತವಾದ ಉದಾತ್ತವಾದ ಮಾನುಷಕವಾದ ಕಾಮಭೋಗಗಳಲ್ಲಿ ವಿಹರಿಸುತ್ತಿದ್ದನು.

ಭಗವಂತನು ಕಾಶ್ಯಪ ಗೋತ್ರದವನು. ಅವನಿಗೆ ಮೂರು ಹೆಸರು. ತಾಯಿತಂದೆಯರು ಇಟ್ಟುದು ವರ್ಧಮಾನ. ರಾಗದ್ವೇಷಗಳನ್ನು ಬಿಟ್ಟುದರಿಂದ [ಆತನು] ಶ್ರಮಣ. ಭೀಮವಾದ ಭಯಭೈರವಗಳನ್ನೂ ಉದಾತ್ತವಾದ ಅಚೇಲಕತ್ವವನ್ನೂ ಪರೀಷಹಗಳನ್ನೂ ಸಹಿಸಿದುದರಿಂದ ದೇವತೆಗಳು [ಅವನಿಗೆ] ಭಗವಂತನಾದ ಶ್ರಮಣ ಮಹಾವೀರ—ಎಂದು ಹೆಸರಿಟ್ಟರು.

ಭಗವಂತನ ತಂದೆಯು ಕಾಶ್ಯಪ ಗೋತ್ರದವನು. ಅವನಿಗೆ ಸಿದ್ಧಾರ್ಥ, ಶ್ರೇಯಾಂಸ, ಯಶಾಂಸ—ಎಂದು ಮೂರು ಹೆಸರು. ಭಗವಂತನ ತಾಯಿ ವಾಸಿಷ್ಠ ಗೋತ್ರದವಳು. ಅವಳಿಗೆ ತ್ರಿಶಲಾ, ವಿದೇಹದತ್ತಾ, ಪ್ರಿಯಕಾರಿಣೀ—ಎಂದು ಮೂರು ಹೆಸರು. ಅವನ ತಂದೆಯ ಸೋದರನಾದ ಸುಪಾರ್ಶ್ವನು ಕಾಶ್ಯಪ ಗೋತ್ರದವನು. ಭಗವಂತನ ಹಿರಿಯಣ್ಣನಾದ ನಂದಿವರ್ಧನನೂ ಹಿರಿಯಕ್ಕನಾದ ಸುದರ್ಶನೆಯೂ ಕಾಶ್ಯಪ ಗೋತ್ರದವರು. ಭಗವಂತನ ಹೆಂಡತಿಯಾದ ಯಶೋದೆಯು ಕೌಂಡಿನ್ಯ ಗೋತ್ರದವಳು. ಮಗಳು ಕಾಶ್ಯಪ ಗೋತ್ರದವಳು. ಅವಳಿಗೆ ಅನವದ್ಯಾ ಮತ್ತು ಪ್ರಿಯದರ್ಶನಾ—ಎಂದು ಎರಡು ಹೆಸರು. ಭಗವಂತನ ಮೊಮ್ಮಗಳು ಕೌಶಿಕ ಗೋತ್ರದವಳು. ಅವಳಿಗೆ ಶೇಷವತಿ ಮತ್ತು ಯಶೋವತಿ ಎಂದು ಎರಡು ಹೆಸರು.

ಭಗವಂತನ ತಾಯಿತಂದೆಯರು ಪಾರ್ಶ್ವ[1]ನನ್ನು ಪೂಜಿಸಿ ಶ್ರಮಣರ ಉಪಾಸಕರಾಗಿದ್ದರು. ಅವರು ಬಹುವರ್ಷ ಶ್ರಮಣರ ಉಪಾಸಕರಾಗಿದ್ದು, ಆರು ತೆರದ ಜೀವನಿಕಾಯಗಳನ್ನು ಕಾಪಾಡುವುದಕ್ಕಾಗಿ ಆಲೋಚಿಸಿ,

1 ಇಪ್ಪತ್ತಮೂರನೆಯ ತೀರ್ಥಂಕರ ಪಾರ್ಶ್ವನಾಥ.

ನಿಂದಿಸಿ, ಗರ್ಹಿಸಿ, ಪ್ರತಿಕ್ರಮಿಸಿ, ತಕ್ಕ ಪ್ರಾಯಶ್ಚಿತ್ತಗಳನ್ನು ನಡೆಸಿ, ದರ್ಭೆಯ ಹಾಸಿಗೆಯ ಮೇಲೆ [ಮಲಗಿ] ಆಹಾರವನ್ನು ಬಿಟ್ಟು, ಮರಣದಲ್ಲಿ ಮುಗಿಯುವ ಸಲ್ಲೇಖನದಿಂದ ಶರೀರವನ್ನು ಶೋಷಿಸಿ, ಸಕಾಲವಾದ ಮಾಸದಲ್ಲಿ ಶರೀರವನ್ನು ಬಿಟ್ಟು ಅಚ್ಯುತಕಲ್ಪದಲ್ಲಿ ದೇವತ್ವವನ್ನು ಪಡೆದರು. . . .

ಆ ಕಾಲದಲ್ಲಿ ಭಗವಂತನಾದ ಶ್ರಮಣ ಮಹಾವೀರನು, ಜ್ಞಾತ್ರಿಯು, ಜ್ಞಾತ್ರಿಪುತ್ರನು, ಜ್ಞಾತ್ರಿಕುಲದಲ್ಲಿ ಹುಟ್ಟಿದವನು, ವಿದೇಹನು, ವಿದೇಹ ದತ್ತನು, ವಿದೇಹಜಾತನು, ವಿದೇಹಸುಕುಮಾರನು ಮೂವತ್ತು ವರುಷ 'ವಿದೇಹ'ನೆಂಬ ಹೆಸರಿನಿಂದ ಮನೆಯ ನಡುವೆ ವಾಸಮಾಡಿ; ತಾಯಿತಂದೆ ಯರು ಸತ್ತು ದೇವಲೋಕವನ್ನು ಪಡೆದ ಮೇಲೆ ತನ್ನ ಪ್ರತಿಜ್ಞೆ[1]ಯನ್ನು ಪೂರೈಸಿ; ಚಿನ್ನ ಬೆಳ್ಳಿ ಬಲವಾಹನ ಧನಕನಕರತ್ನಾದಿಗಳನ್ನು ತ್ಯಾಗಮಾಡಿ, ದಾತಾರರಿಗೆ ಒಂದು ವರುಷ ಕಾಲ ಭಾಗಿಸಿ ಹಂಚಿಕೊಟ್ಟು; ಹೇಮಂತದ ಮೊದಲ ಮಾಸದಲ್ಲಿ, ಮೊದಲ ಪಕ್ಷದಲ್ಲಿ, ಮಾರ್ಗಶೀರ್ಷ ಬಹುಳದ ದಶಮಿಯಂದು, ಉತ್ತರಫಲ್ಗುಣೀ ನಕ್ಷತ್ರಯೋಗದಲ್ಲಿ ಅಭಿನಿಷ್ಕ್ರಮಿಸಲು ಮನಸ್ಸುಮಾಡಿದನು.

—[ಆಚಾರಾಂಗ: II, 15; § 13—17.]

*　　*　　*　　*

ಆಗ ದೇವರೂ ಮಾನವರೂ ಅಸುರರೂ ಕೂಡಿ "ಜಯ, ನಂದಾ! ಜಯ, ಭದ್ರಾ! ಅಭಗ್ನವಾದ ಜ್ಞಾನ ದರ್ಶನ ಚಾರಿತ್ರಗಳಿಂದ ಅಜಿತವಾದ ಇಂದ್ರಿಯಗಳನ್ನು ಜಯಿಸು. ಜಯಿಸಿ, ಶ್ರಮಣಧರ್ಮವನ್ನು ಪಾಲಿಸು. ದೇವ, ವಿಘ್ನಗಳನ್ನೆಲ್ಲ ಗೆದ್ದು ಸಿದ್ಧಿಯಲ್ಲಿ ವಾಸಿಸು. ಧೃತಿಯೆಂಬ ಕಚ್ಚೆ ಯನ್ನು ಬಿಗಿದು, ತಪಸ್ಸಿನಿಂದ ರಾಗದ್ವೇಷವೆಂಬ ಮಲ್ಲರನ್ನು ನಿಗ್ರಹಿಸು. ಅಪ್ರಮತ್ತನಾಗಿ ಉತ್ತಮವಾದ ಶುಕ್ಲಧ್ಯಾನದಿಂದ ಎಂಟು ಕರ್ಮಗಳ ಶತ್ರುವನ್ನು ಮರ್ದಿಸು. ತ್ರೈಲೋಕ್ಯರಂಗಮಧ್ಯದಲ್ಲಿ ಆರ್ಹತಪತಾಕೆ ಯನ್ನು ಹಾರಿಸು, ವೀರ! ಕತ್ತಲೆ ಹೋಗಿ ಅನುತ್ತರವಾದ ಕೇವಲವೆಂಬ ಶ್ರೇಷ್ಠ ಜ್ಞಾನವನ್ನು ಪಡೆ. ಪರೀಷಹ ಚಮುವನ್ನು ಸಂಹರಿಸಿ, ಜಿನವರರು ಬೋಧಿಸಿದ ಅಕುಟಿಲವಾದ ಮಾರ್ಗದಲ್ಲಿ ಪರದ ಕಡೆ ಮುಖಮಾಡು.

---

1. 'ತಾಯಿತಂದೆಯರು ಜೀವಿಸಿರುವಾಗ, ಕೂದಲು ಕಿತ್ತು, ಮನೆಬಿಟ್ಟು ಶ್ರಮಣನಾಗುವುದು ತಕ್ಕುದಲ್ಲ' ಎಂಬ ಪ್ರತಿಜ್ಞೆ. (ಕಲ್ಪಸೂತ್ರ. § 94.)

ಜಯ, ಕ್ಷತ್ರಿಯ ವರ ವೃಷಭ! ಬಹು ದಿನಗಳು, ಬಹು ಪಕ್ಷಗಳು, ಬಹು ಮಾಸಗಳು, ಬಹು ಋತುಗಳು, ಬಹು ಅಯನಗಳು, ಬಹು ಸಂವತ್ಸರ ಗಳು ಪರೀಷಹ ಉಪಸರ್ಗಗಳಿಗೆ ಭಯಗೊಳ್ಳದೆ ಭಯಭೈರವಗಳನ್ನು ತಾಳಿ ಸಹಿಸು. ಧರ್ಮದಲ್ಲಿ ವಿಘ್ನವಿಲ್ಲದವನಾಗು!" ಎಂದು ಜಯಘೋಷ ವೆತ್ತಿದರು.

—[ಕಲ್ಪಸೂತ್ರ: § 114.]

## ಭಗವಂತನ ಪರಿನಿಷ್ಕ್ರಮಣ

ಆ ಕಾಲದಲ್ಲಿ, ಆ ಸಮಯದಲ್ಲಿ, ಹೇಮಂತದ ಮೊದಲ ಮಾಸದಲ್ಲಿ, ಮೊದಲ ಪಕ್ಷದಲ್ಲಿ, ಮಾರ್ಗಶಿರ ಬಹುಳದ ದಶಮಿಯ ಸುವ್ರತವೆಂಬ ದಿವಸ, ವಿಜಯವೆಂಬ ಮುಹೂರ್ತದಲ್ಲಿ, ಉತ್ತರಫಲ್ಗುಣೀ ನಕ್ಷತ್ರ ಯೋಗದಲ್ಲಿ, ನೆರಳು ಪೂರ್ವದ ಕಡೆ ತಿರುಗಿದಾಗ, ಮೊದಲ ಪೌರುಷಿ[1] ಯಾದ ಮೇಲೆ, ಭಗವಂತನು ಮೂರು ದಿನ ನೀರಿಲ್ಲದೆ ಉಪವಾಸವಿದ್ದು, ಒಂದು ಬಟ್ಟೆ[2] ಹಾಕಿಕೊಂಡು, ಸಾವಿರ ಜನ ಹೊರಬೇಕಾದ ಚಂದ್ರಪ್ರಭ[3] ವೆಂಬ ಶಿಬಿಕೆಯಲ್ಲಿ ದೇವ ಮನುಷ್ಯ ಅಸುರರ ಪರಿಸೆಯೊಡನೆ ಉತ್ತರ ಕ್ಷತ್ರಿಯ ಕುಂಡಪುರ ನಿವೇಶದಿಂದ ಹೆದ್ದಾರಿಯಲ್ಲಿ ಹೊರಟು, ಜ್ಞಾತ್ರಿಷಂಡವೆಂಬ ಉದ್ಯಾನದ ಬಳಿಸಾರಿದನು. ಅಲ್ಲಿ, ರಾತ್ರಿಯ ಪ್ರಾರಂಭದಲ್ಲಿ, ಸ್ವಲ್ಪ ಉನ್ನತವಾದ ಸ್ಥಳದಲ್ಲಿ ಚಂದ್ರಪ್ರಭವನ್ನು ಸದ್ದಿಲ್ಲದೆ ನಿಲ್ಲಿಸಿ, ಅದರಿಂದ ಸದ್ದಿಲ್ಲದೆ ಇಳಿದು, ಪೂರ್ವಾಭಿಮುಖನಾಗಿ ಸಿಂಹಾಸನದ ಮೇಲೆ ಕುಳಿತು ಆಭರಣ ಅಲಂಕಾರಗಳನ್ನು ಕಳಚಿದನು.

ಆಗ ವೈಶ್ರಮಣದೇವನು ಭಗವಂತನ ಕಾಲಿಗೆರಗಿ, ಆ ಆಭರಣಾಲಂಕಾರಗಳನ್ನು ಹಂಸಲಕ್ಷಣದ ಪಟದಲ್ಲಿ ಆತುಕೊಂಡನು. ಆಗ ಭಗವಂತನು ಎಡಗೈಯಿಂದ ಎಡಗಡೆಯೂ ಬಲಗೈಯಿಂದ ಬಲಗಡೆಯೂ ಐದು ಮುಷ್ಟಿಗಳಲ್ಲಿ ಲುಂಚಮಾಡಿಕೊಂಡನು. ಆಗ ದೇವೇಂದ್ರನೂ ದೇವರಾಯನೂ ಆದ ಶಕ್ರನು ಭಗವಂತನ ಕಾಲಿಗೆರಗಿ, ವಜ್ರದ ಸ್ಥಾಲಿಯಲ್ಲಿ ಆ ಕೂದಲನ್ನು ಆತುಕೊಂಡು, "ಅಪ್ಪಣೆ ಕೊಡು, ಭನ್ತೇ" ಎಂದು ಮೂರು ಬಾರಿ ಕೇಳಿ, ಕ್ಷೀರಸಾಗರಕ್ಕೆ ಒಯ್ದನು.

ಭಗವಂತನು ಲುಂಚಮಾಡಿಕೊಂಡು, ಸಿದ್ಧರಿಗೆ ನಮಸ್ಕಾರಮಾಡಿ, "ನಾನು ಸರ್ವ ಪಾಪಕರ್ಮಗಳನ್ನೂ ಮಾಡದಿರುವೆನು" ಎಂದು ಸಾಮಾಯಿಕವನ್ನು ಹೇಳಿ, ಚಾರಿತ್ರವನ್ನು ಕೈಕೊಂಡನು. ಆಗ ದೇವಪರಿಷೆಯೂ ಮನುಷ್ಯಪರಿಷೆಯೂ ಬರೆದ ಚಿತ್ರದಂತೆ ನಿಂತಿದ್ದಿತು. . . .

ಆಗ ಭಗವಂತನಿಗೆ ಮನಃಪರ್ಯಯಜ್ಞಾನ ಹುಟ್ಟಿತು. . . .

ಅನಂತರ ಭಗವಂತನು "ನಾನು ಹನ್ನೆರಡು ವರುಷ ದೇಹವನ್ನು ಗಮನಿಸದೆ, ಶರೀರವನ್ನು ಕಡೆಗಣಿಸಿ, ದೇವ ಮಾನುಷ ತಿರ್ಯಗ್ಜಾತಿಗಳಿಂದ ಉಂಟಾಗುವ ಎಲ್ಲಾ ಉಪಸರ್ಗಗಳನ್ನೂ ಸಮತೆಯಿಂದ ಸಹಿಸುವೆನು,

1. ಯಾಮ. 2 ಇಂದ್ರನು ತಂದುದು. 3. ಇಂದ್ರನು ತರಿಸಿದುದು.



ಮಹಾವೀರನ ನಿಷ್ಕ್ರಮಣ

Courtesy:
Dr. O. C. Gangoly

ಕ್ಷಮಿಸುವೆನು, ತಾಳುವೆನು, ಅನುಭವಿಸುವೆನು" ಎಂಬ ಅಭಿಗ್ರಹವನ್ನು ತೊಟ್ಟನು.

ಭಗವಂತನು ಈ ರೀತಿಯ ಅಭಿಗ್ರಹವನ್ನು ತೊಟ್ಟು, ದೇಹವನ್ನು ಗಮನಿಸದೆ ಬಿಟ್ಟು, ದಿವಸದ ಮುಹೂರ್ತಶೇಷವಿರುವಾಗ ಕುಮ್ಮಾರಗ್ರಾಮವನ್ನು ಸೇರಿದನು. ಅಲ್ಲಿ, ದೇಹದ ಗೊಡವೆ ಬಿಟ್ಟು, ಅನುತ್ತರವಾದ ಆಲಯಗಳಲ್ಲಿ, ಅನುತ್ತರವಾದ ವಿಹಾರಗಳಲ್ಲಿ, ಸಂಯಮದಲ್ಲಿ, ದಯೆಯಲ್ಲಿ, ಸಂವರದಲ್ಲಿ, ತಪದಲ್ಲಿ, ಬ್ರಹ್ಮಚರ್ಯವಾಸದಲ್ಲಿ, ಕ್ಷಮೆಯಲ್ಲಿ, ಮುಕ್ತಿಯಲ್ಲಿ, ಸಮಿತಿಯಲ್ಲಿ, ಗುಪ್ತಿಯಲ್ಲಿ, ತುಷ್ಟಿಯಲ್ಲಿ, ಸ್ಥಾನದಲ್ಲಿ, ಕ್ರಮದಲ್ಲಿ, ಸದಾಚಾರದ ಫಲವಾದ ನಿರ್ವಾಣದಲ್ಲಿ ಮತ್ತು ಮುಕ್ತಿಮಾರ್ಗದಲ್ಲಿ ಆತ್ಮವನ್ನು ಭಾವಿಸು[1]ತ್ತ ವಿಹರಿಸಿದನು. ಹೀಗೆ ವಿಹರಿಸುತ್ತ, ದೇವ ಮಾನುಷ ತಿರ್ಯಗ್ಜಾತಿಗಳಿಂದಾದ ಎಲ್ಲಾ ಉಪಸರ್ಗಗಳನ್ನೂ ವ್ಯಥೆಪಡದೆ, ಮನಸ್ಸಿನಲ್ಲಿ ದೈನ್ಯಪಡದೆ, ಮನಸ್ಸು ಮಾತು ಮೈಗಳ ಮೂರು ವಿಧದ ಗುಪ್ತಿಗಳೊಡನೆ ಸಮತೆಯಿಂದ ಸಹಿಸಿದನು, ಕ್ಷಮಿಸಿದನು, ತಾಳಿದನು, ಅನುಭವಿಸಿದನು.

—[ಆಚಾರಾಂಗ: II, 15; § 22—24.]

---

1. ಆತ್ಮದ ಅನಂತಜ್ಞಾನ, ದರ್ಶನ, ಬಲ, ವೀರ್ಯಗಳನ್ನು ಬೆಳೆಸುತ್ತ.

## ಹನ್ನೆರಡು ವರುಷದ ತಪಸ್ಸು

ಭಗವಂತನು ಒಂದು ವರ್ಷ ಒಂದು ತಿಂಗಳು ಚೀವರಧಾರಿಯಾಗಿದ್ದು, ಅನಂತರ ಅಚೇಲಕನಾದನು, ಪಾಣಿಪ್ರತಿಗ್ರಹಿ[1]ಯಾದನು. ಭಗವಂತನು ಹನ್ನೆರಡು ವರುಷಕ್ಕೆ ಮಿಕ್ಕು ತನ್ನ ದೇಹವನ್ನು ಗಮನಿಸದೆ ಅದರ ಗೊಡವೆ ಬಿಟ್ಟನು. ಒದಗಿದ ಉಪಸರ್ಗಗಳು ದಿವ್ಯವಾಗಲಿ, ಮಾನುಷವಾಗಲಿ, ತಿರ್ಯಂಚವಾಗಲಿ, ಅನುಕೂಲವಾಗಲಿ, ಪ್ರತಿಕೂಲವಾಗಲಿ— ಅದನ್ನು ಸಮತೆಯಿಂದ ಸಹಿಸಿದನು, ಕ್ಷಮಿಸಿದನು, ತಾಳಿದನು, ಅನುಭವಿಸಿದನು.

ಅಂದಿನಿಂದ ಭಗವಂತನು ಮನೆಯಿಲ್ಲದವನಾಗಿ, ಸಮಿತಿಗಳಿಂದಲೂ ಗುಪ್ತಿಗಳಿಂದಲೂ ಕೂಡಿ, ಇಂದ್ರಿಯಗಳನ್ನೂ ಬ್ರಹ್ಮಚರ್ಯವನ್ನೂ ಗೋಪನ ಮಾಡಿ; ಕ್ರೋಧ, ಮಾನ, ಮಾಯ, ಲೋಭಗಳಿಲ್ಲದೆ; ಶಾಂತನಾಗಿ, ಪ್ರಶಾಂತನಾಗಿ, ಉಪಶಾಂತನಾಗಿ, ಪರಿನಿರ್ವೃತನಾಗಿ; ಅನಾಸ್ರವನಾಗಿ, ಮಮಕಾರವಿಲ್ಲದೆ, ಅಕಿಂಚನನಾಗಿ; ಗ್ರಂಥಿಗಳನ್ನು ಕತ್ತರಿಸಿ ಉಪಲೇಪ ವಿಲ್ಲದವನಾದನು. [ಭಗವಂತನು] ಕಂಚಿನ ಪಾತ್ರೆಯಂತೆ ಮುಕ್ತತೋಯ ನಾಗಿ, ಶಂಖದಂತೆ ನಿರಂಜನನಾಗಿ, ಜೀವದಂತೆ ಅಪ್ರತಿಹತವಾದ ಗತಿ[2] ಯುಳ್ಳವನಾಗಿ, ಗಗನದಂತೆ ನಿರಾಲಂಬನಾಗಿ, ವಾಯುವಿನಂತೆ ಅಪ್ರತಿ ಬದ್ಧನಾಗಿ, ಸಾರಸಸಲಿಲದಂತೆ ಶುದ್ಧಹೃದಯನಾಗಿ, ಪುಷ್ಕರಪತ್ರದಂತೆ ನಿರುಪಲೇಪನಾಗಿ, ಕೂರ್ಮದಂತೆ ಗುಪ್ತೇಂದ್ರಿಯನಾಗಿ, ಖಡ್ಗವಿಷಾಣ ದಂತೆ ಒಬ್ಬೊಂಟಿಯಾಗಿ, ವಿಹಗದಂತೆ ವಿಪ್ರಮುಕ್ತನಾಗಿ, ಭೇರುಂಡ ಪಕ್ಷಿಯಂತೆ ಅಪ್ರಮತ್ತನಾಗಿ, ಕುಂಜರದಂತೆ ಶೌಂಡೀರನಾಗಿ, ವೃಷಭ ದಂತೆ ಸ್ಥಾಮವಂತನಾಗಿ, ಸಿಂಹದಂತೆ ದುರ್ಧರನಾಗಿ, ಮಂದರದಂತೆ ನಿಷ್ಕಂಪನಾಗಿ, ಸಾಗರದಂತೆ ಗಂಭೀರನಾಗಿ, ಚಂದ್ರನಂತೆ ಸೌಮ್ಯಲೇಶ್ಯ[3] ನಾಗಿ, ಸೂರ್ಯನಂತೆ ದೀಪ್ತತೇಜನಾಗಿ, ಜಾತಿಕನಕದಂತೆ ಜಾತರೂಪನಾಗಿ, ವಸುಂಧರೆಯಂತೆ ಸರ್ವಸ್ಪರ್ಶಸಹಿಷ್ಣುವಾಗಿ, ಸುಹೃತಹುತಾಶನನಂತೆ ತೇಜಸ್ಸಿನಿಂದ ಜ್ವಲಿಸುತ್ತಿದ್ದನು. . . .

ಭಗವಂತನು, ವರ್ಷಾವಾಸ ಹೊರತಾಗಿ ಗ್ರೀಷ್ಮ ಹೇಮಂತಗಳ ಎಂಟು ಮಾಸವನ್ನು—ಗ್ರಾಮಗಳಲ್ಲಿ ಒಂದು ರಾತ್ರಿಯಂತೆ, ನಗರಗಳಲ್ಲಿ

---

1. ನಿರ್ಗ್ರಂಥರು ತಮ್ಮ ಭಿಕ್ಷೆಯನ್ನು ಯಾವ ಪಾತ್ರೆಯಲ್ಲೂ ಸ್ವೀಕರಿಸದೆ, ಕೈ ಬೊಗಸೆ ಯಲ್ಲಿ ಪಡೆಯುವರು. 2. ಜೀವದ ಗತಿ ಊರ್ಧ್ವ, ತಡೆಯಿಲ್ಲದೆ ಮೇಲೆ ಹೋಗತಕ್ಕದು. 3. ಅನುಬಂಧದಲ್ಲಿ 'ಲೇಶ್ಯ' ನೋಡಿ.

ಐದು ರಾತ್ರಿಯಂತೆ—[ಕಳೆದು], ವಾಸೀ[1]ಚಂದನಗಳನ್ನೂ ತೃಣಮಣಿಗಳನ್ನೂ ಮಣ್ಣುಚಿನ್ನಗಳನ್ನೂ ಸುಖದುಃಖಗಳನ್ನೂ ಸಮಾನವಾಗಿ ಕಂಡು, ಇಹಲೋಕ ಪರಲೋಕಗಳಿಗೆ ಸಿಕ್ಕಿಕೊಳ್ಳದೆ, ಬದುಕು ಸಾವುಗಳನ್ನು ಬಯಸದೆ, ಸಂಸಾರಪಾರಗಾಮಿಯಾಗಿ, ಕರ್ಮದ ಕೊಳೆಯನ್ನು ಕಳೆಯುವುದರಲ್ಲಿ ತೊಡಗಿ ವಿಹರಿಸುತಿದ್ದನು. —[ಕಲ್ಪಸೂತ್ರ, § 117—119.]

*   *   *   *

ಭಗವಂತನಾದ ಶ್ರಮಣನು ಎದ್ದು, ಮಾಡಬೇಕಾದುದನ್ನು ತಿಳಿದು, ಆ ಹೇಮಂತದಲ್ಲಿ ಪರಿವ್ರಜಿಸಿ ವಿಹಾರಮಾಡಿದುದನ್ನು ನಾನು ಕೇಳಿರುವಂತೆ ತಿಳಿಸುವೆನು. (1)

'ಈ ವಸ್ತ್ರ[2]ದಿಂದ ನಾನು ಮುಚ್ಚಿಕೊಳ್ಳುವುದಿಲ್ಲ'—ಎಂದು ಆ ಹೇಮಂತದಲ್ಲಿ ಮಾತ್ರ ಅದನ್ನು ಬಳಸಿದನು. ಅವನು ಯಾವಜ್ಜೀವವೂ ಪಾರಕ್ಕೆಹೋದವನು. ಇದು ಅವನ ಧರ್ಮ[3]ಕ್ಕೆ ಅನುಸಾರವಾದುದು. (2)

ನಾಲ್ಕು ತಿಂಗಳಿಗಿಂತ ಹೆಚ್ಚು ಕಾಲ ಅನೇಕ ತೆರದ ಪ್ರಾಣಿಗಳು ಬಂದು ಸೇರಿ, ಅವನ ಮೈಮೇಲೆ ಹರಿದಾಡಿ ಹಿಂಸಿಸಿದುವು. (3)

ಒಂದು ವರ್ಷದ ಮೇಲೆ ಒಂದು ತಿಂಗಳ ಕಾಲ ಭಗವಂತನು ಆ ವಸ್ತ್ರಕವನ್ನು ಬಿಡಲಿಲ್ಲ. ಆ ಮೇಲೆ ಭಗವಂತನು ಆ ವಸ್ತ್ರವನ್ನು ಬಿಟ್ಟು, ಅಚೇಲಕನಾಗಿ, ಪರಿತ್ಯಾಗಿಯಾಗಿ, ಮನೆಯಿಲ್ಲದವನಾದನು. (4)

ಅನಂತರ ಒಂದು ಪುರುಷಪ್ರಮಾಣದ ಮಾರ್ಗದಲ್ಲಿ ಈರ್ಯಾ ಸಮಿತಿಯಿಂದ ನೋಡುತ್ತ ಸಂಚರಿಸಿದನು. ಅಲ್ಲಿ ಸೇರಿದ ಅನೇಕ ಜನರು ಅವನನ್ನು ಕಂಡು ಭಯಗೊಂಡರು, ಅವನನ್ನು ಹೊಡೆಹೊಡೆದು ಕೂಗಿಕೊಂಡರು. (5)

ಸ್ತ್ರೀಯರು ಮಲಗುವ ವಾಸಿಸುವ ಸ್ಥಳಗಳನ್ನು ತಿಳಿದು, 'ನಾನು ಸಾಗಾರಿಕನಾಗುವುದಿಲ್ಲ' ಎಂದು ತನ್ನ ವೈರಾಗ್ಯಮಾರ್ಗವನ್ನು ತಾನೆ ಕಂಡುಕೊಂಡು[4], ಧ್ಯಾನಮಾಡಿದನು. (6)

ಯಾವ ಗೃಹಸ್ಥರೊಡನೆಯೂ ಸೇರದೆ ಅವನು ಧ್ಯಾನಿಸಿದನು. ಪ್ರಶ್ನೆ ಕೇಳಿದರೆ, ಉತ್ತರ ಕೊಡನು. ತನ್ನಿಷ್ಟಕ್ಕೆ ತಾನು ಹೋಗುವನು. ಋಜುಮಾರ್ಗದಿಂದ ಹಿಂದಿರುಗನು. (7)

---

1. ಕೆಟ್ಟ ಗಂಧ. 2. ಇಂದ್ರನು ಕೊಟ್ಟುದು. 3. ಮುಂದೆ 'ಕೇಶಿ ಗೌತಮ ಸಂವಾದ' ನೋಡಿ. 4. ಬುದ್ಧನು ಕೂಡ ಹೀಗೆಯೆ ತನ್ನ ವೈರಾಗ್ಯ ಮಾರ್ಗವನ್ನು ತಾನೆ ಕಂಡುಕೊಂಡನು.

ಅಭಿವಂದಿಸಿದವರಿಗೆ ಉತ್ತರಕೊಡದಿರುವುದು ಕೆಲವರಿಗೆ ಸುಲಭವಲ್ಲ. ಅಲ್ಪಪುಣ್ಯದವರು ಅವನನ್ನು ದೊಣ್ಣೆಯಿಂದ ಬಡಿದರು, ಹಿಂಸಿಸಿದರು. (8)

ಸಹಿಸಲು ಕಷ್ಟವಾದ ಪರುಷಗಳನ್ನು ಪರಾಕ್ರಮಿಯಾದ ಮುನಿಯು ಗಮನಿಸಲಿಲ್ಲ. ಆಖ್ಯಾತ ನೃತ್ಯ ಗೀತಗಳಲ್ಲಿ, ದಂಡಯುದ್ಧದಲ್ಲಿ, ಮುಷ್ಟಿಯುದ್ಧದಲ್ಲಿ ಆತನು ರಮಿಸಲಿಲ್ಲ. (9)

ಆ ಸಮಯದಲ್ಲಿ ಜ್ಞಾತ್ರಿಪುತ್ರನು ಅನ್ಯೋನ್ಯವಾಗಿ ಮಾತನಾಡುತ್ತಿದ್ದವರನ್ನು ಶೋಕವಿಲ್ಲದೆ ಕಂಡನು. ಆ ಉದಾತ್ತವಾದವುಗಳಲ್ಲಿ ಶರಣವನ್ನು ಬೇಡದೆ ಜ್ಞಾತ್ರಿಪುತ್ರನು ನಡೆದನು. (10)

ಎರಡು ವರುಷಕ್ಕೆ ಹೆಚ್ಚು ಕಾಲ ತಣ್ಣೀರನ್ನು ಬಳಸದೆ ನಿಷ್ಕ್ರಮಿಸಿದನು. ಏಕತ್ವ[1]ವನ್ನು ಪಡೆದು, ದೇಹವನ್ನು ಗೋಪನಮಾಡಿ, ದರ್ಶನವನ್ನು ಕಂಡುಕೊಂಡು, ಶಾಂತನಾದನು. (11)

ಪೃಥ್ವೀಕಾಯಗಳನ್ನೂ ಅಪ್‌ಕಾಯಗಳನ್ನೂ ತೇಜಃಕಾಯಗಳನ್ನೂ ವಾಯುಕಾಯಗಳನ್ನೂ ತ್ರಸಕಾಯಗಳಾದ ಪನಕ ಬೀಜ ಹರಿತಗಳನ್ನೂ ಅರಿತು, (12)

ಅವುಗಳಲ್ಲಿ ಸೂಕ್ಷ್ಮವಾದ ಜೀವಗಳಿರುವುದನ್ನು ತಿಳಿದು, ಮಹಾವೀರನು ಅವುಗಳ ಹಿಂಸೆಯನ್ನು ಬಿಟ್ಟು ವಿಹರಿಸಿದನು. (13)

ಸ್ಥಾವರವಾಗಿದ್ದುದು ತ್ರಸವಾಗುವುದು, ತ್ರಸವಾಗಿದ್ದುದು ಸ್ಥಾವರವಾಗುವುದು. ಸರ್ವಯೋನಿಗಳಲ್ಲಿ ಬಂದ ಸತ್ವಗಳು ಪ್ರತ್ಯೇಕವಾಗಿ ಕರ್ಮಮಾಡಿ ಬಾಲರಾಗುವುವು. (14)

'ಉಪಧಿಗಳಿಂದ ಕೂಡಿದ ಬಾಲನು ಕರ್ಮದ ಕ್ಲೇಶಕ್ಕೆ ಸಿಕ್ಕುವನೆ'ಂದು ಭಗವಂತನು ತಿಳಿದಿರುವನು. ಕರ್ಮವನ್ನು ಸರ್ವವಿಧದಲ್ಲಿಯೂ ತಿಳಿದು, ಭಗವಂತನು ಪಾಪವಾದುದನ್ನು ನಿವಾರಿಸುವನು. (15)

ಆದಾನದ ಸ್ರೋತವನ್ನೂ ಮೃಷಾವಾದದ ಸ್ರೋತವನ್ನೂ ಯೋಗವನ್ನೂ ಸರ್ವರೀತಿಗಳಲ್ಲಿ ತಿಳಿದು, ಅನನ್ಯಸದೃಶವಾದ ಜ್ಞಾನವುಳ್ಳ ಮೇಧಾವಿಯು ಎರಡನ್ನೂ ಕಂಡು, ಕ್ರಿಯೆಯನ್ನು ತಿಳಿಸುವನು. (16)

ಅಹಿಂಸೆಯನ್ನು ಆಚರಿಸುತ್ತ, ಹಿಂಸೆಯನ್ನು ತಾನೂ ಮಾಡಲಿಲ್ಲ, ಇತರರಿಂದಲೂ ಮಾಡಿಸಲಿಲ್ಲ. ಸರ್ವಕರ್ಮಗಳಿಗೂ ಕಾರಣರು ಸ್ತ್ರೀಯರೆಂದು ಆ ತಿಳಿದವನು ಕಂಡನು. (17)

1. ಏಕಾಂತವಾಗಿ ವಾಸಿಸಿ, ಪರರೊಡನೆ ಬೆರೆಯದಿರುವಿಕೆ.

ತನಗಾಗಿ ಸಿದ್ಧಗೊಳಿಸಿದುದನ್ನು ಅವನು ಸೇವಿಸಲಿಲ್ಲ. ಕರ್ಮವನ್ನು ಎಲ್ಲ ರೀತಿಗಳಲ್ಲೂ ಕಂಡನು. ಪಾಪಕವಾದುದು ಯಾವುದನ್ನೂ ಭಗವಂತನು ಮಾಡದೆ ಇದ್ದನು. ಶುದ್ಧವಾದುದನ್ನು ಭುಂಜಿಸಿದನು. (18)

ಅವನು ಇತರರ ಬಟ್ಟೆಯನ್ನು ಉಪಯೋಗಿಸನು, ಇತರರ ಪಾತ್ರೆಯಲ್ಲಿ ಊಟಮಾಡನು. ಅವಮಾನವನ್ನು ಬಿಟ್ಟು, ಆಹಾರ ತಯಾರಿಸುವ ಸ್ಥಾನಗಳಿಗೆ ಅಶರಣನಾಗಿ ಹೋಗುವನು. (19)

ತಿನ್ನುವುದು ಕುಡಿಯುವುದರಲ್ಲಿ ಅಳತೆ ತಿಳಿದು, ರಸಗಳಲ್ಲಿ ಅದು ಬೇಕು ಇದು ಬೇಕೆಂದು ಆಶಿಸುತ್ತಿರಲಿಲ್ಲ. ಮುನಿಯು ಕಣ್ಣು ಉಜ್ಜಕೂಡದು, ಮೈಯನ್ನು ಕೆರೆಯಕೂಡದು. (20)

ಸ್ವಲ್ಪ ಸುತ್ತ ನೋಡಿ, ಸ್ವಲ್ಪ ಹಿಂದೆ ನೋಡಿ, ಕೇಳಿದಾಗ ಸ್ವಲ್ಪ ಮಾತನಾಡಿ, ದಾರಿಯಲ್ಲಿ ಗಮನಿಸಿ ನೋಡಿ ನಡೆಯಬೇಕು. (21)

ಶಿಶಿರವು ಅರ್ಧ ನಡೆದಿರುವಾಗ, ಮನೆಯಿಲ್ಲದವನು ವಸ್ತ್ರವನ್ನು ಬಿಟ್ಟು, ಬಾಹುಗಳನ್ನು ಪಸರಿಸಿ ಪರಾಕ್ರಮಿಸಬೇಕು; ಸ್ಕಂಧವನ್ನು ಅವಲಂಬಿಸಿ ನಿಲ್ಲಬಾರದು.[1] (22)

ಮತಿಮಂತನಾದ ಬ್ರಾಹ್ಮಣನು ಅನೇಕ ರೀತಿಗಳಲ್ಲಿ ಪ್ರತಿಗ್ರಹವನ್ನು ಬಿಟ್ಟನು. ಭಗವಂತನು ಈ ವಿಧಿಯನ್ನು ಅನುಕ್ರಮಿಸಿದನು. (ಇತರರು) ಹೀಗೆ ನಡೆಯುವರು. (23)

ಎಂದು ಹೇಳುತ್ತೇನೆ.

—[ಆಚಾರಾಂಗ: I, 9; 1.]

* * * *

ಯಾವಯಾವ ವಿಧವಿಧದ ಆಸನ ಶಯ್ಯೆಗಳನ್ನು ಮಹಾವೀರನು ಸೇವಿಸಿದನೆಂದು ಹೇಳಿರುವುದೋ ಅದನ್ನು ಹೇಳಲಾಗುವುದು. (1)

ಶೂನ್ಯಗೃಹಗಳಲ್ಲಿ, ಸತ್ರಗಳಲ್ಲಿ, ಅರವಟ್ಟಿಗೆಗಳಲ್ಲಿ, ಅಂಗಡಿಗಳಲ್ಲಿ ಒಮ್ಮೊಮ್ಮೆ ವಾಸಿಸಿದನು. ಕಮ್ಮಾರರ ಅಂಗಡಿಗಳಲ್ಲಿ, ಹುಲ್ಲಿನ ರಾಶಿಯಲ್ಲಿ ಒಮ್ಮೊಮ್ಮೆ ವಾಸಿಸಿದನು. (2)

ಬಂದವರ ಬಿಡಾರ[2]ಗಳಲ್ಲಿ, ಆರಾಮಗಳಲ್ಲಿ, ನಗರಗಳಲ್ಲಿ ಒಮ್ಮೊಮ್ಮೆ ವಾಸಿಸಿದನು. ಶ್ಮಶಾನಗಳಲ್ಲಿ, ಜನರಿಲ್ಲದ ಮನೆಯಲ್ಲಿ, ಮರದ ಬುಡದಲ್ಲಿ ಒಮ್ಮೊಮ್ಮೆ ವಾಸಿಸಿದನು. (3)

---

1. ಎಲ್ಲಿಯೂ ಮೈಯೊರಗಿ ನಿಲ್ಲಬಾರದು.
2. ಬಂದವರು ಇಳಿದುಕೊಳ್ಳಲು ಕಟ್ಟಿದ ಬಿಡಾರಗಳಲ್ಲಿ.

ಈ ಈ ಸ್ಥಳಗಳಲ್ಲಿ ಮುನಿಯಾದ ಶ್ರಮಣನು ಹದಿಮೂರು ದೀರ್ಘ ವರ್ಷಗಳು ವಾಸಿಸಿದನು; ರಾತ್ರಿಹಗಲು ಅಪ್ರಮತ್ತನಾಗಿ ಸಮಾಹಿತ ಮನನಾಗಿ ಧ್ಯಾನಮಾಡಿದನು. (4)

ಭಗವಂತನು ಅಪ್ರಮತ್ತನಾಗಿ, ನಿದ್ರೆಯನ್ನು ಕಾಮಿಸಿ ಮಲಗು ತ್ತಿರಲಿಲ್ಲ. ಜಾಗೃತನಾಗಿ, ಆಸೆಗಳನ್ನು ಬಿಟ್ಟು, ಸ್ವಲ್ಪ ನಿದ್ದೆಮಾಡು ತ್ತಿದ್ದನು. (5)

ಭಗವಂತನು ಎಚ್ಚತ್ತು, ಸಂಯಮದಿಂದ ಎದ್ದು, ಪುನಃ ಮಲಗುವನು. ರಾತ್ರಿ ಒಮ್ಮೆ ಹೊರಗೆ ಬಂದು ಒಂದು ಮುಹೂರ್ತ ಹೊರಗೆ ತಿರು ಗಾಡುವನು. (6)

ಅವನು ಇದ್ದ ಕಡೆ ಅನೇಕ ತೆರದ ಭಯಂಕರವಾದ ಉಪಸರ್ಗ ಗಳಾದುವು; ಹರಿದಾಡುವ ಹಾರಾಡುವ ಪ್ರಾಣಿಗಳು ಮೇಲೆ ಬೀಳುವುವು. (7)

ಕೆಟ್ಟವರೂ ಗ್ರಾಮರಕ್ಷಕರೂ ಕೈಯಲ್ಲಿ ಶಸ್ತ್ರಹಿಡಿದವರೂ ಮೇಲೆ ಬೀಳುವರು; ಒಂದು ಕಡೆ ಗ್ರಾಮದ ಸ್ತ್ರೀಪುರುಷರಿಂದ ಉಪಸರ್ಗ ವಾಗುವುದು. (8)

ಇಹಪರಲೋಕಗಳ ಅನೇಕ ತೆರದ ಭಯಂಕರವಾದವುಗಳನ್ನೂ ಸುಗಂಧ ದುರ್ಗಂಧಗಳನ್ನೂ ಅನೇಕ ತೆರನಾದ ಶಬ್ದಗಳನ್ನೂ, (9)

ವಿಧವಿಧವಾದ ರೂಪಗಳ ಸ್ಪರ್ಶಗಳನ್ನೂ ಸಮಿತಿಯಿಂದ ಸದಾ ಸಹಿಸಿದನು. ಅರತಿ ರತಿಗಳನ್ನು ಜಯಿಸಿ, ಬ್ರಾಹ್ಮಣನು ಹೆಚ್ಚು ಮಾತ ನಾಡದೆ ನಡೆದನು. (10)

ಒಮ್ಮೆ ಒಂದು ರಾತ್ರೆ ಏಕಚರರು[1] ಅವನನ್ನು ಕೇಳಿದರು. ಉತ್ತರ ಕೊಡದಿರಲು ತೊಂದರೆಪಡಿಸಿದರು. ಆದರೆ ಅವನು ವೈರವಿಲ್ಲದೆ ಧ್ಯಾನ ಮಾಡುತ್ತಿದ್ದನು. (11)

ಒಮ್ಮೆ "ಒಳಗಿರುವರು ಯಾರು?" ಎಂದರೆ, "ನಾನು, ಭಿಕ್ಷು" ಎನ್ನು ವನು. ತೊಂದರೆ ಕೊಟ್ಟರೂ ಮೌನದಿಂದ ಧ್ಯಾನಮಾಡುವುದು ಉತ್ತಮ ವಾದ ಧರ್ಮ. (12)

ಶಿಶಿರದ ಗಾಳಿ ಬೀಸಿ ನೊಂದಾಗ, ಮನೆಯಿಲ್ಲದ ಕೆಲವರು ಚಳಿಗಾಳಿ ಯಿಂದ ಮರೆಯಾದ ಮನೆಯನ್ನು ಹುಡುಕುವರು. (13)

'ಬೆಚ್ಚಗಿನ ಬಟ್ಟೆಗಳನ್ನು ಹಾಕಿಕೊಳ್ಳೋಣ. ಮನೆಯೊಳಗೆ ಹೋಗೋಣ. ಬೆಂಕಿ ಕಾಯಿಸೋಣ. ಹಿಮ ತಗಲುವುದರಿಂದಾಗುವ

---

1. ಒಂದು ತೆರದ ಪರಿವ್ರಾಜಕರು.

ಈ ಬಹು ದುಃಖವನ್ನು ಸಹಿಸೋಣ' (ಎಂದು ಕೆಲವರು ಹೇಳು ವರು). (14)

ಆದರೆ ಭಗವಂತನು ಅಂತಹದಾವುದನ್ನೂ ಆಶಿಸಲಿಲ್ಲ; ಆಶ್ರಯ ಗಳನ್ನು ಕಡೆಗಣಿಸಿ ಸಹಿಸಿದನು. ಒಂದು ರಾತ್ರಿ ಹೊರಗೆ ಬಂದು, ಭಗವಂತನು ಸಮತೆಯಿಂದ ಸಹಿಸಲು ಶಕ್ತನಾದನು. (15)

ಮತಿಮಂತನಾದ ಬ್ರಾಹ್ಮಣನು, ಅನೇಕ ರೀತಿಗಳಲ್ಲಿ ಪ್ರತಿಗ್ರಹ ಗಳನ್ನು ಬಿಟ್ಟ ಭಗವಂತನು, ಈ ವಿಧಿಯನ್ನು ಅನುಕ್ರಮಿಸಿದನು. (ಇತರರು) ಹೀಗೆ ನಡೆಯುವರು. (16)

ಎಂದು ಹೇಳುತ್ತೇನೆ.

— [ಆಚಾರಾಂಗ: I, 9; 2.]

* * * *

ಹುಲ್ಲು, ಚಳಿ, ಬಿಸಿ, ಸೊಳ್ಳೆ, ನೊಣಗಳಿಂದಾದ ನೋವನ್ನು, ತರತರ ವಾದ ನೋವುಗಳನ್ನು, ಸದಾ ಸಮಿತನಾಗಿ ಸಹಿಸಿದನು. (1)

ಸಂಚರಿಸಲು ಕಷ್ಟವಾದ ಲಾಢದಲ್ಲಿ, ವಜ್ರಭೂಮಿ ಶುಭ್ರಭೂಮಿ ಗಳಲ್ಲಿ, ತಿರುಗಾಡಿದನು. ಕೊಳೆ ಕಲ್ಲು ಮಣ್ಣು ಕಡ್ಡಿಗಳು ತುಂಬಿ ಅಹಿತ ವಾದ ಕಡೆ ವಾಸಿಸಿದನು, ಮಲಗಿದನು. (2)

ಲಾಢದಲ್ಲಿ ಅವನಿಗೆ ಬಹಳ ಉಪಸರ್ಗಗಳು. ಅನೇಕ ಜನರು ಮೇಲೆ ಬಿದ್ದರು. ಆ ರೂಕ್ಷದೇಶದಲ್ಲಿ ನಾಯಿಗಳು ಮೇಲೆ ಬಿದ್ದು ಹಿಂಸಿಸಿದುವು. (3)

ಮೇಲೆ ಬಿದ್ದು ಕಚ್ಚುವ ನಾಯಿಗಳನ್ನು ಸ್ವಲ್ಪ ಜನರು ತಡೆದರು. 'ಛು! ಛು!' ಎನ್ನುತ್ತ ಶ್ರಮಣನನ್ನು ನಾಯಿಗಳಿಂದ ಕಚ್ಚಿಸಿದರು. (4)

ಜನರು ಇಂತಹವರು. ಬಹು ಜನ ಶ್ರಮಣರು ವಜ್ರಭೂಮಿಯ ಪರುಷವಾದ ಆಹಾರವನ್ನು ತಿಂದು, ಲಟ್ಠಿಯನ್ನೋ ನಾಲಿಕೆಯನ್ನೋ ಹಿಡಿದು ವಾಸಿಸುವರು. (5)

ಹೀಗೆ ತಿರುಗಿದರೂ ನಾಯಿಗಳು ಕಚ್ಚಿ ಕೀಳುವುವು. ಲಾಢದಲ್ಲಿ ಸಂಚರಿಸುವುದು ಕಷ್ಟ. (6)

ಆ ಮನೆಯಿಲ್ಲದವನು ಪ್ರಾಣಿಗಳಲ್ಲಿ ದಂಡವನ್ನು ತೊರೆದು, ತನ್ನ ದೇಹವನ್ನು ಗಮನಿಸಲಿಲ್ಲ; ಭಗವಂತನು ಬಲ್ಲವನಾಗಿ ಗ್ರಾಮದ ಮುಳ್ಳು[1] ಗಳನ್ನು ಸಹಿಸಿದನು. (7)

1. ಉಪಸರ್ಗಗಳು.

ಯುದ್ಧದ ತಲೆಯಲ್ಲಿನ ಆನೆಯಂತೆ, ಆ ಮಹಾವೀರನು ವಿಜಯಿಯಾದನು. ಒಂದೊಂದು ಬಾರಿ ಅವನಿಗೆ ಲಾಢದಲ್ಲಿ ಒಂದು ಗ್ರಾಮವೂ ಸಿಕ್ಕುತ್ತಿರಲಿಲ್ಲ. (8)

ಪರಿಗ್ರಹಗಳನ್ನು ಬಿಟ್ಟ ಅವನು ಗ್ರಾಮದ ಬಳಿ ಬಂದರೆ, ಜನರು ಹೊರಗೆ ಬಂದು, 'ಇಲ್ಲಿಂದ ಬೇರೆಲ್ಲಾದರೂ ಹೋಗು!' ಎಂದು ಮೇಲೆ ಬೀಳುವರು. (9)

ದೊಣ್ಣೆಯಿಂದ, ಮುಷ್ಟಿಯಿಂದ, ಕುಂತ ಮೊದಲಾದ ಹಣ್ಣುಗಳಿಂದ ಮಣ್ಣು ಹೆಂಟೆಯಿಂದ, ಮಡಕೆಯ ಚೂರು ನೊದಲಾದವುಗಳಿಂದ ಅವನನ್ನು ಹೊಡೆಹೊಡೆದು ಕೂಗಿಕೊಳ್ಳುವರು. (10)

ಒಂದು ಸಲ ಅವನ ಮೈಯನ್ನು ಮುತ್ತಿ ಮಾಂಸವನ್ನು ಕಿತ್ತರು; ಪರೀಷಹ ಕೊಟ್ಟು ಕೂದಲು ಕಿತ್ತರು; ಮೇಲೆ ಧೂಳು ಚೆಲ್ಲಿದರು. (11)

ಅವನನ್ನು ಮೇಲೆತ್ತಿ ಕೆಳಗೆ ಬೀಳಿಸಿದರು. ಅವನ ಆಸನ[1]ಗಳನ್ನು ಕೆಡಿಸಿದರು. ಭಗವಂತನು ದೇಹವನ್ನು ಗಮನಿಸದೆ, ನಮ್ರನಾಗಿ, ಆಸಗಳನ್ನು ಬಿಟ್ಟು, ದುಃಖವನ್ನು ಸಹಿಸಿದನು. (12)

ಯುದ್ಧದ ತುದಿಯ ಶೂರನನ್ನೆಂತಂತೆ ಮಹಾವೀರನನ್ನು ಸುತ್ತ ಮುತ್ತಿದ್ದರು. ಪರುಷಗಳನ್ನು ಸಹಿಸುತ್ತ, ಭಗವಂತನು ಅಚಲನಾಗಿ ನಡೆದನು. (13)

ಭಗವಂತನು ಜೀವವಿರುವವರೆಗೆ ಈ ವಿಧಿಯನ್ನು ಅನುಕ್ರಮಿಸಿದನು. (14)

ಎಂದು ಹೇಳುತ್ತೇನೆ.

—[ಆಚಾರಾಂಗ: I. 9; 3.]

* * * *

ಭಗವಂತನು ರೋಗಗಳಿಗೆ ಪಕ್ಕಾಗದಿದ್ದರೂ ಚಳಿ ಬಿಸಿ ಸೊಳ್ಳೆ ನೊಣಗಳನ್ನು ಸಹಿಸಲು ಶಕ್ತನಾದನು. ನೋವಾಗಲಿ, ನೋವಾಗದಿರಲಿ, ಚಿಕಿತ್ಸೆಯನ್ನು ಒಲ್ಲನು. (1)

(ದೇಹವು ಅಶುಚಿಯೆಂದು) ತಿಳಿದು, ಸಂಶೋಧನ[2] ವಮನಗಳನ್ನೂ, ದೇಹದ ಅಭ್ಯಂಗನವನ್ನೂ ಸ್ನಾನವನ್ನೂ, ಮೈಯುಜ್ಜುವುದನ್ನೂ ಹಲ್ಲುಜ್ಜುವುದನ್ನೂ ಮಾಡುತ್ತಿರಲಿಲ್ಲ. (2)

1. ಧ್ಯಾನಗಳಿಗೆ ಒಪ್ಪುವ ಆಸನ.

2. ವಿರೇಚನ.

ಬ್ರಾಹ್ಮಣನು ಬಹು ಮಾತನಾಡದೆ, ಗ್ರಾಮ[1]ಧರ್ಮಗಳಲ್ಲಿ ವಿರತನಾಗಿ ತಿರುಗಿದನು. ಒಂದೊಂದು ಸಲ, ಶಿಶಿರದಲ್ಲಿ, ಭಗವಂತನು ನೆರಳಲ್ಲಿ ಕುಳಿತು ಧ್ಯಾನಿಸುವನು. (3)

ಗ್ರೀಷ್ಮದಲ್ಲಿ ಬಹು ತಾಪಕ್ಕೆ ಮುಖಕೊಟ್ಟು ಕುಳಿತುಕೊಳ್ಳುವನು. ಕಠಿಣವಾದ ಅನ್ನ, ಬದರ ಚೂರ್ಣ, ಕುಲ್ಮಾಷಗಳಿಂದ ಜೀವಿಸುವನು. (4)

ಈ ಮೂರನ್ನು ಪ್ರತಿಸೇವಿಸಿ, ಭಗವಂತನು ಎಂಟು ಮಾಸ ಜೀವಿಸಿದನು. ಒಮ್ಮೊಮ್ಮೆ ಭಗವಂತನು ಅರ್ಧ ತಿಂಗಳು, ಒಂದು ತಿಂಗಳು, ಪಾನಮಾಡುತ್ತಲೇ ಇರಲಿಲ್ಲ. (5)

ಒಂದೊಂದು ಸಲ, ಹಗಲೂರಾತ್ರಿ ಏನನ್ನೂ ಆಶಿಸದೆ, ಎರಡು ಅಥವಾ ಆರು ತಿಂಗಳಿಗೆ ಮಿಕ್ಕು ಕುಡಿಯದೆ ಇದ್ದನು. ಕೆಲವು ಸಲ ತಂಗಳು ತಿಂದನು. (6)

ಕೆಲಕೆಲವು ಸಲ ಆರು ದಿನಗಳಿಗೊಮ್ಮೆ, ಎಂಟು ದಿನಗಳಿಗೊಮ್ಮೆ, ಹತ್ತು ದಿನಗಳಿಗೊಮ್ಮೆ, ಹನ್ನೆರಡು ದಿನಗಳಿಗೊಮ್ಮೆ ಉಣ್ಣುತ್ತಿದ್ದನು. ಆಶೆಯಿಲ್ಲದೆ ಸಮಾಧಿಯಲ್ಲಿ ಮುಂದುವರಿಯುತ್ತಿದ್ದನು. (7)

ಮಹಾವೀರನು ಬಲ್ಲವನಾಗಿ ತಾನು ಪಾಪಮಾಡುತ್ತಿರಲಿಲ್ಲ, ಇತರರಿಂದ ಮಾಡಿಸುತ್ತಿರಲಿಲ್ಲ; ಇತರರು ಮಾಡುವುದಕ್ಕೂ ಒಪ್ಪುತ್ತಿರಲಿಲ್ಲ. (8)

ಗ್ರಾಮವನ್ನಾಗಲಿ ನಗರವನ್ನಾಗಲಿ ಹೊಕ್ಕಾಗ, ಇತರರಿಗಾಗಿ ಮಾಡಿದ ಗ್ರಾಸವನ್ನು ಬೇಡಿದನು.[2] ವಿಶುದ್ಧವಾದ ಭಿಕ್ಷೆಯನ್ನು ಪಡೆದು, ಇಂದ್ರಿಯಗಳನ್ನು ತಡೆದು, ಸೇವಿಸಿದನು. (9)

ತಾನು ಭಿಕ್ಷೆಗೆ ಹೋಗುವಾಗ, ಹಸಿದ ಕಾಗೆಗಳಾಗಲಿ ರಸವನ್ನು ಹುಡುಕುವ ಇತರ ಸತ್ವಗಳಾಗಲಿ ನಿಂತಿದ್ದರೆ, ಅವು ಪುನಃ ಪುನಃ ಕೆಳಕ್ಕೆ ಎರಗುವುದನ್ನು ಕಂಡರೆ, (10)

ಶ್ರಮಣನಾಗಲಿ ಬ್ರಾಹ್ಮಣನಾಗಲಿ ಭಿಕ್ಷುಕನಾಗಲಿ ಅತಿಥಿಯಾಗಲಿ ಶ್ವಪಾಕನಾಗಲಿ ಬೆಕ್ಕು ನಾಯಿಗಳಾಗಲಿ ಮೊದಲು ನಿಂತಿದ್ದರೆ, (11)

ಅವರ (ಭಿಕ್ಷಾ) ವೃತ್ತಿಯನ್ನು ಮುರಿಯದೆ, ಮನಸ್ಸಿನಲ್ಲಿ ಕೆಟ್ಟುದನ್ನು ಬಿಟ್ಟು, ಭಗವಂತನು ಮಂದವಾಗಿ ಪರಾಕ್ರಮಿಸಿದನು; ಅಹಿಂಸೆಯಲ್ಲಿ ಮನಸ್ಸಿಟ್ಟು, ಭಿಕ್ಷಾಚರಣಮಾಡಿದನು. (12)

---

1. ಇಂದ್ರಿಯಗಳ ಗುಂಪು. 2. ಶ್ರಮಣನು ತನಗಾಗಿಯೇ ಅಟ್ಟುದನ್ನು ಗ್ರಹಿಸಕೂಡದು.

ನೆನೆದ ಅಥವಾ ಒಣಗಿದ ಅಥವಾ ತಣ್ಣಗಾದ ಪಿಂಡ, ಹಳೆಯ ಕುಲ್ಮಾಷ, ಹಳೆಯ ಕಾಳಿನ ಅನ್ನ, ಅಥವಾ ಕೊಳೆತ ಧಾನ್ಯ—ಇವು ಸಿಕ್ಕಲಿ, ಸಿಕ್ಕದಿರಲಿ; ಅವನು ದ್ರವ್ಯವಂತ[1]ನಾಗಿದ್ದನು. (13)

ಮಹಾವೀರನು ಆಸನಸ್ಥನಾಗಿ ಅಲುಗಾಡದೆ ಧ್ಯಾನಮಾಡಿದನು; ಮೇಲೆ, ಕೆಳಗೆ, ಸುತ್ತಲೆತ್ತ ಗಮನಿಸುತ್ತ ಆಸೆಗಳನ್ನು ಬಿಟ್ಟು ಸಮಾಧಿಯಲ್ಲಿ ಇದ್ದನು. (14)

ಕಷಾಯಗಳಿಲ್ಲದೆ, ಆಸೆಗಳನ್ನು ಬಿಟ್ಟು, ಶಬ್ದ ರೂಪಗಳಿಂದ ಬಿಡುಗಡೆ ಹೊಂದಿ, ಧ್ಯಾನಿಸಿದನು; ಛದ್ಮಸ್ಥನಾಗಿದ್ದರೂ ಪರಾಕ್ರಮಿಸುತ್ತ, ಯಾವಾಗಲೂ ಪ್ರಮಾದದಿಂದ ಕೆಲಸಮಾಡಲಿಲ್ಲ. (15)

ತಾನೇ ಸ್ವಂತವಾಗಿ ಸಾಕ್ಷಾತ್ಕರಿಸಿಕೊಂಡು[2], ಆತ್ಮಶುದ್ಧಿಗಾಗಿ ಇಂದ್ರಿಯಗಳನ್ನು ತಡೆದು, ಅಭಿನಿರ್ವೃತನಾಗಿ, ಮಾಯವಿಲ್ಲದವನಾಗಿ ಯಾವಜ್ಜೀವವೂ ಭಗವಂತನು ಸಮಾಹಿತನಾಗಿದ್ದನು. (16)

ಭಗವಂತನು ಜೀವವಿರುವವರೆಗೂ ಈ ವಿಧಿಯನ್ನು ಅನುಕ್ರಮಿಸಿದನು. (17)

ಎಂದು ಹೇಳುತ್ತೇನೆ.

—[ಆಚಾರಾಂಗ: I, 9; 4.]

*   *   *   *

ಹೀಗೆ, ಭಗವಂತನು ಅನುತ್ತರವಾದ ಜ್ಞಾನದಿಂದ, ಅನುತ್ತರವಾದ ದರ್ಶನದಿಂದ, ಅನುತ್ತರವಾದ ಚಾರಿತ್ರದಿಂದ, ಅನುತ್ತರವಾದ ಆಲಯಗಳಲ್ಲಿ, ಅನುತ್ತರವಾದ ವಿಹಾರಗಳಲ್ಲಿ, ಅನುತ್ತರವಾದ ವೀರ್ಯದಿಂದ, ಅನುತ್ತರವಾದ ಆರ್ಜವದಿಂದ, ಅನುತ್ತರವಾದ ಮಾರ್ದವದಿಂದ, ಅನುತ್ತರವಾದ ಲಾಘವದಿಂದ, ಅನುತ್ತರವಾದ ಕ್ಷಾಂತಿಯಿಂದ, ಅನುತ್ತರವಾದ ಮುಕ್ತಿಯಿಂದ, ಅನುತ್ತರವಾದ ತುಷ್ಟಿಯಿಂದ, ಸತ್ಯ ಸಂಯಮ ತಪ ಸುಚರಿತ್ರಗಳ ಸೌಭಾಗ್ಯದ ಫಲವಾದ ಅನುತ್ತರವಾದ ನಿರ್ವಾಣ ಮಾರ್ಗದಲ್ಲಿ ಆತ್ಮವನ್ನು ಭಾವಿಸು[3]ತ್ತ ಹನ್ನೆರಡು ವರ್ಷ ಕಳೆಯಿತು.

—[ಕಲ್ಪಸೂತ್ರ, § 120.]

---

1. ಸಂಯಮವೆಂಬ ದ್ರವ್ಯ. 2. ಬುದ್ಧನು ಕೂಡ ಹೀಗೆಯೆ 'ಸಯಂ ಅಭಿಞ್ಞಾಯ ಸಚ್ಛಿಕತ್ವಾ' ಎಂದರೆ ತನ್ನ ಸ್ವಂತ ಅಭಿಜ್ಞಾನದಿಂದ ಸಾಕ್ಷಾತ್ಕರಿಸಿಕೊಂಡನೆಂದು ಹೇಳಲಾಗಿದೆ. 3. ಬೆಳೆಸು.



ಕೇವಲ ಜ್ಞಾನೋತ್ಪತ್ತಿ

Courtesy:
Sheth Anandji Kalianji

## ಕೇವಲ ಜ್ಞಾನೋತ್ಪತ್ತಿ

ಭಗವಂತನು ಈ ರೀತಿ ವಿಹರಿಸುತ್ತ ಹನ್ನೆರಡು ವರುಷ ಕಳೆಯಿತು. ಹದಿಮೂರನೆಯ ವರ್ಷ ನಡೆಯುವಾಗ, ಗ್ರೀಷ್ಮದ ಎರಡನೆಯ ಮಾಸದಲ್ಲಿ, ನಾಲ್ಕನೆಯ ಪಕ್ಷದಲ್ಲಿ, ವೈಶಾಖ ಶುದ್ಧದ ದಶಮಿಯಂದು, ಸುವ್ರತವೆಂಬ ದಿವಸ, ವಿಜಯವೆಂಬ ಮುಹೂರ್ತದಲ್ಲಿ, ಉತ್ತರಫಲ್ಗುಣೀ ನಕ್ಷತ್ರ ಯೋಗದಲ್ಲಿ, ನೆರಳು ಪೂರ್ವದ ಕಡೆ ತಿರುಗಿದಾಗ, ಮೊದಲ ಪೌರುಷಿ ಯಾದನಂತರ; ಜೃಂಭಿಕಗ್ರಾಮವೆಂಬ ನಗರದ ಹೊರಗೆ, ಋಜುಪಾಲಿಕಾ ನದಿಯ ಉತ್ತರದಡದಲ್ಲಿ, ಸಾಮಾಗನೆಂಬ ಗೃಹಸ್ಥನ ಗದ್ದೆಯಲ್ಲಿ, ಊರ್ಧ್ವ ಜಾನುವಾಗಿ ಅಧಃಶಿರನಾಗಿ ಧ್ಯಾನಕೋಷ್ಠ ಉಪಗತನಾಗಿ, ವಿಜಯಾ ವರ್ತವೆಂಬ ಚೈತ್ಯದ ಪೂರ್ವೋತ್ತರ ದಿಶಾಭಾಗದಲ್ಲಿ, ಶಾಲವೃಕ್ಷಕ್ಕೆ ಸ್ವಲ್ಪ ದೂರದಲ್ಲಿ; ಹಿಮ್ಮಡಿ ಜೋಡಿಸಿ, ಪರ್ಯಂಕಾಸನದಲ್ಲಿ, ಸೂರ್ಯನ ತಾಪಕ್ಕೆ ಮೈ ಆತು; ಕೃತ್ಸ್ನವಾಗಿ ಪರಿಪೂರ್ಣವಾಗಿ ತಡೆಯಿಲ್ಲದೆ ಅನಾವರಣ ವಾಗಿ ಅನಂತರವಾಗಿ ಅನುತ್ತರವಾದ ಕೇವಲವೆಂಬ ಶ್ರೇಷ್ಠವಾದ ಜ್ಞಾನ ದರ್ಶನಗಳನ್ನು, ನಿರ್ವಾಣವನ್ನು, ಶುಕ್ಲಧ್ಯಾನದಿಂದ ಪಡೆದನು.

ಆಗ ಭಗವಂತನು ಅರ್ಹನಾಗಿ, ಜಿನನಾಗಿ, ಕೇವಲಿಯಾಗಿ, ಸರ್ವಜ್ಞನಾಗಿ, ಸರ್ವಭಾವದರ್ಶಿಯಾಗಿ, ದೇವ ಮನುಷ್ಯ ಅಸುರ ಲೋಕ ಗಳ ಪ್ರಜೆಗಳನ್ನು ತಿಳಿದನು. ಅವರು ಎಲ್ಲಿಂದ ಬರುವರು? ಎಲ್ಲಿಗೆ ಹೋಗುವರು? ಮನುಷ್ಯರಾಗಿ, ಮೃಗವಾಗಿ ಹುಟ್ಟುವರೆ? ಅಥವಾ ದೇವರಾಗಿ, ನಾರಕರಾಗಿ ಹುಟ್ಟುವರೆ? ಅವರು ಉಣ್ಣುವುದು, ಕುಡಿಯು ವುದು, ಮಾಡುವುದು, ಬಯಸುವುದು ಏನು? ಅವರ ಬಹಿರಂಗವಾದ ಮತ್ತು ರಹಸ್ಯವಾದ ಕರ್ಮಗಳಾವುವು? ಅವರ ಮಾತುಕತೆಗಳು, ಮನಸ್ಸಿನ ಆಲೋಚನೆಗಳು ಏನು?—ಎಂದು ಸರ್ವಲೋಕದ ಸರ್ವಜೀವಿ ಗಳ ಸರ್ವಭಾವಗಳನ್ನೂ ಕಂಡು ತಿಳಿದು ವಿಹರಿಸುತ್ತಿದ್ದನು. . . .

—[ಆಚಾರಾಂಗ: II, 15; § 25 – 26.]

* * * *

ಭಗವಂತನು ಶ್ರೇಷ್ಠವಾದ ಜ್ಞಾನದರ್ಶನಗಳನ್ನು ಧರಿಸಿ, ತನ್ನನ್ನೂ ಲೋಕವನ್ನೂ ಅಭಿಸಮೀಕ್ಷಿಸಿದನು. ಧರ್ಮವನ್ನು ಮೊದಲು ದೇವತೆ ಗಳಿಗೂ, ಅನಂತರ ಮನುಷ್ಯರಿಗೂ ಕಲಿಸಿದನು.

ವರಜ್ಞಾನದರ್ಶನಗಳನ್ನು ಧರಿಸಿದ ಭಗವಂತನು ಗೌತಮ[1]ನೇ ಮೊದಲಾದ ಶ್ರಮಣರಿಗೆ ಪಂಚಮಹಾವ್ರತಗಳನ್ನೂ [ಅವುಗಳ] ಭಾವನೆಗಳನ್ನೂ ಆರು ಜೀವನಿಕಾಯಗಳನ್ನೂ ಕಲಿಸಿ ಹೇಳಿದನು. . . .

—[ಆಚಾರಾಂಗ: II, 15; § 28 – 29.]

1. ಮಹಾವೀರನ ಹನ್ನೊಂದು ಗಣಧರರಲ್ಲಿ ಮೊದಲನೆಯವನು.

## ಭಗವಂತನ ಪರಿನಿರ್ವಾಣ

ಆ ಕಾಲದಲ್ಲಿ, ಆ ಸಮಯದಲ್ಲಿ, ಭಗವಂತನು ಮೊದಲ ವರ್ಷಾವಾಸವನ್ನು ಅಸ್ಥಿಕಗ್ರಾಮದಲ್ಲಿಯೂ, ಮೂರು ವರ್ಷಾವಾಸಗಳನ್ನು ಚಂಪಾ ಪೃಷ್ಠಿಚಂಪೆಗಳಲ್ಲಿಯೂ, ಹನ್ನೆರಡು ವರ್ಷಾವಾಸಗಳನ್ನು ವೈಶಾಲಿ ವಾಣಿಜ ಗ್ರಾಮಗಳಲ್ಲಿಯೂ, ಹದಿನಾಲ್ಕು ವರ್ಷಾವಾಸಗಳನ್ನು ರಾಜಗೃಹದಲ್ಲೂ ನಾಲಂದದ ಹೊರಗೂ, ಮಿಥಿಲೆಯಲ್ಲಿ ಆರನ್ನೂ, ಭದ್ರಿಕೆಯಲ್ಲಿ ಎರಡನ್ನೂ, ಆಲಭಿಕೆಯಲ್ಲಿ ಒಂದನ್ನೂ, ಒಂದನ್ನು ಪ್ರಣೀತ ಭೂಮಿಯಲ್ಲೂ, ಒಂದನ್ನು ಶ್ರಾವಸ್ತಿಯಲ್ಲೂ [ಕಳೆದು], ಪಾವಾ ಎಂಬ ಮಧ್ಯಮದ ರಾಜಾ ಹಸ್ತಿ ಪಾಲನ ಕರಣಿಕಸಭೆಯಲ್ಲಿ ಒಂದನ್ನೂ ಕಳೆದನು. ಅದು ಅವನ ಕಡೆಯ ವರ್ಷಾವಾಸ.

ಆ ವರ್ಷಾವಾಸದ ನಾಲ್ಕನೆಯ ಮಾಸದ ಏಳನೆಯ ಪಕ್ಷದ ಕಾರ್ತಿಕ ಬಹುಳದ ಹದಿನೈದನೆಯ ದಿನದ ರಾತ್ರಿಯ ಕಡೆಯಲ್ಲಿ ಭಗವಂತನಾದ ಶ್ರಮಣ ಮಹಾವೀರನು ಕಾಲಗತನಾದನು, ವಿಕ್ರಮಿಸಿದನು, ಲೋಕವನ್ನು ಬಿಟ್ಟನು, ಜಾತಿ ಜರಾ ಮರಣಗಳ ಸಂಬಂಧವನ್ನು ಕತ್ತರಿಸಿದನು, ಸಿದ್ಧನಾದನು, ಬುದ್ಧನಾದನು, ಮುಕ್ತನಾದನು, ಅಂತಕರನಾದನು, ಪರಿನಿರ್ವೃತನಾದನು, ಸರ್ವದುಃಖದಿಂದ ಬಿಡುವಾದನು. . . .

—[ಕಲ್ಪಸೂತ್ರ: § 122—123.]

* * * *

ಆ ಕಾಲದಲ್ಲಿ, ಆ ಸಮಯದಲ್ಲಿ, ಭಗವಂತನಾದ ಶ್ರಮಣ ಮಹಾವೀರನು ಮೂವತ್ತು ವರುಷಗಳು ಮನೆಯಲ್ಲಿ ವಾಸಿಸಿ, ಹನ್ನೆರಡು ವರುಷಕ್ಕೆ ಮಿಕ್ಕು ಛದ್ಮಸ್ಥನಾಗಿದ್ದು, ಮೂವತ್ತು ವರುಷಗಳಿಗೆ ಕಡಿಮೆ ಕೇವಲಿಯಾಗಿದ್ದು, ನಲುವತ್ತೆರಡು ವರುಷ ಶ್ರಮಣನಾಗಿದ್ದು, ಒಟ್ಟು ಎಪ್ಪತ್ತೆರಡು ವರ್ಷ ಪಾಲಿಸಿ; ವೇದನೀಯ, ಆಯುಸ್ಸು, ನಾಮ, ಗೋತ್ರಗಳು ಕ್ಷಯಿಸಲು; ಈ ಅವಸರ್ಪಿಣಿಯ ದುಃಷಮಸುಷಮದ ಬಹುಪಾಲು ಕಳೆದು ಮೂರು ವರ್ಷ ಎಂಟೂವರೆ ತಿಂಗಳು ಉಳಿದಿರುವಾಗ; ಪಾವಾ ಎಂಬ ಮಧ್ಯಮದ ರಾಜಾ ಹಸ್ತಿಪಾಲನ ಕರಣಿಕಸಭೆಯಲ್ಲಿ, ಒಂಟಿಯಾಗಿ, ಏಕಾಕಿಯಾಗಿ, ಸ್ವಾತಿ ನಕ್ಷತ್ರಯೋಗದಲ್ಲಿ, ಪ್ರತ್ಯೂಷಕಾಲ ಸಮಯದಲ್ಲಿ, ಸಂಪರ್ಯಂಕಾಸನದಲ್ಲಿ ಕುಳಿತು; ಕಲ್ಯಾಣ ಫಲವಿಪಾಕಗಳ ಐವತ್ತೈದು

ಅಧ್ಯಯನಗಳನ್ನೂ ಪಾಪಫಲವಿಪಾಕಗಳ ಐವತ್ತೈದು ಅಧ್ಯಯನಗಳನ್ನೂ ಮೂವತ್ತಾರು ಕೇಳದ ವಿವರಣೆಗಳನ್ನೂ[1] ಉಸುರಿ, ಪಹಾಣವೆಂಬ ಅಧ್ಯಯನವನ್ನು ವಿವರಿಸಿ ಕಾಲಗತನಾದನು, ವಿಕ್ರಮಿಸಿದನು, ಲೋಕವನ್ನು ಬಿಟ್ಟನು, ಜಾತಿ ಜರಾ ಮರಣಗಳ ಸಂಬಂಧವನ್ನು ಕತ್ತರಿಸಿದನು, ಸಿದ್ಧನಾದನು, ಬುದ್ಧನಾದನು, ಮುಕ್ತನಾದನು, ಅಂತಕರನಾದನು, ಪರಿನಿರ್ವೃತನಾದನು, ಸರ್ವದುಃಖದಿಂದ ಬಿಡುವಾದನು.

—[ಕಲ್ಪಸೂತ್ರ: § 147.]

1. ಇದೆ ಉತ್ತರಾಧ್ಯಯನ ಸೂತ್ರ.

* ಓಂ *

* ನಮೊ ಸಮಣಸ್ಸ ಭಗವಓ ಮಹಾವೀರಸ್ಸ *

# ಭಗವಂತನ ಕಡೆಗಾಲದ ಮಾತು

ಏವಂ ಸೆ ಉದಾಹು ಅಣುತ್ತರನಾಣೀ ಅಣುತ್ತರದಂಸೀ ಅಣುತ್ತರ ನಾಣದಂಸಣಧರೆ ಅರಹಾ ನಾಯಪುತ್ತೆ ಭಗವಂ ವೇಸಾಲಿಯೆ ವಿಯಾಹಿಯೆ ತ್ತಿ ಬೇಮಿ ||

[ಅನುತ್ತರ ಜ್ಞಾನಿಯಾದ, ಅನುತ್ತರ ದರ್ಶಿಯಾದ, ಅನುತ್ತರವಾದ ಜ್ಞಾನದರ್ಶನಗಳನ್ನು ಧರಿಸಿದ ಅರ್ಹತನಾದ ಜ್ಞಾತ್ರಿಪುತ್ರನು, ಭಗವಂತನು, ವಿಖ್ಯಾತನಾದ ವೈಶಾಲಿಕನು, ಹೀಗೆ ಹೇಳಿದನೆಂದು--ನಾನು ಹೇಳುತ್ತೇನೆ.]

— ಉತ್ತರಾಧ್ಯಯನ: ೬, ೧೭.

ಈ ಭಾಗದಲ್ಲಿ **'ಶ್ರೀ ಉತ್ತರಾಧ್ಯಯನ ಸೂತ್ರ'**ದಿಂದ ಹತ್ತು ಅಧ್ಯಯನಗಳನ್ನು ಆಯ್ದು ಕನ್ನಡಿಸಿದೆ.

**'ದ್ರುಮಪತ್ರಕ', 'ಏಲಕ'** ಮತ್ತು **'ಖಲುಂಕೀಯ'** ಎಂಬ ಮೊದಲ ಮೂರು ಅಧ್ಯಯನಗಳು ಹಲವು ಉಪಮಾನಗಳ ಮೂಲಕ ಜೈನದರ್ಶನದ ಮುಖ್ಯ ತತ್ವಗಳನ್ನು ತಿಳಿಸುತ್ತವೆ.

**'ನಮಿಪ್ರವ್ರಜ್ಯ', 'ಚಿತ್ತ ಸಂಭೂತೀಯ', 'ಮಹಾ ನಿರ್ಗ್ರಂಥೀಯ'** ಮತ್ತು **'ರಥನೇಮೀಯ'** ಎಂಬ ಮುಂದಿನ ನಾಲ್ಕು ಅಧ್ಯಯನಗಳು ಸಂನ್ಯಾಸತ್ವದ ಮಹತ್ವವನ್ನು ಹಲವು ಪರ್ಯಾಯಗಳಿಂದ ವಿವರಿಸುವುವು.

ಅನಂತರದ **'ಹರಿಕೇಶೀಯ'** ಮತ್ತು **'ಯಜ್ಞೀಯ'** ಎಂಬ ಎರಡು ಅಧ್ಯಯನಗಳು ಜಾತಿವಾದದ ಹುರುಳನ್ನು ಮನಗಾಣಿಸುವುವು.

ಕಡೆಯದಾದ **'ಕೇಶಿಗೌತಮೀಯ'**ವೆಂಬುದು ಪಾರ್ಶ್ವತೀರ್ಥಂಕರನ ಮತ್ತು ಮಹಾವೀರನ ಧರ್ಮಗಳಲ್ಲಿ ಕಂಡುಬರುವ ವ್ಯತ್ಯಾಸಕ್ಕೆ ಕಾರಣವನ್ನೂ, ಜೈನದರ್ಶನದ ಸಾರವನ್ನೂ ಮನೋಹರವಾಗಿ ವರ್ಣಿಸುವುದು.

# ೧. ಮರದ ಎಲೆ

('ದ್ರುಮಪತ್ರಕ' ಎಂಬ ಹತ್ತನೆಯ ಅಧ್ಯಯನ.)

ಅನೇಕ ರಾತ್ರಿಗಳಾದನಂತರ ಹಳದಿಯಾದ ಮರದ ಎಲೆ ಕಳಚಿ ಬೀಳುವುದು. ಮನುಷ್ಯರ ಜೀವಿತವೂ ಹೀಗೆಯೆ. [ಅದರಿಂದ,] ಒಂದು ಸಮಯ ಕೂಡ ಪ್ರಮತ್ತನಾಗಬೇಡ, ಗೌತಮ. (1)

ದರ್ಭೆಯ ತುದಿಯಲ್ಲಿ ತೂಗಾಡುವ ಮಂಜಿನ ಕಣವು ನಿಲ್ಲುವುದು ಸ್ವಲ್ಪಕಾಲ. ಮನುಷ್ಯರ ಜೀವಿತವೂ ಹೀಗೆಯೆ. ಒಂದು ಸಮಯ ಕೂಡ ಪ್ರಮತ್ತನಾಗಬೇಡ, ಗೌತಮ. (2)

ಆಯುಸ್ಸು ಓಡುತ್ತದೆ. ಜೀವಿತವು ಚಂಚಲ. [ಅದರಿಂದ] ಹಿಂದೆ ಮಾಡಿದ [ಕರ್ಮದ] ಕೊಳೆಯನ್ನು ತೊಳೆದುಹಾಕು. ಒಂದು ಸಮಯ ಕೂಡ ಪ್ರಮತ್ತನಾಗಬೇಡ, ಗೌತಮ. (3)

ಈ ದೀರ್ಘಕಾಲದಲ್ಲಿ, ಎಲ್ಲಾ ಪ್ರಾಣಿಗಳಿಗೂ ಮನುಷ್ಯ ಜನ್ಮವು ದುರ್ಲಭ. ಕರ್ಮಗಳ ವಿಪಾಕವು ಗಾಢವಾದುದು. ಒಂದು ಸಮಯ ಕೂಡ ಪ್ರಮತ್ತನಾಗಬೇಡ, ಗೌತಮ. (4)

ಜೀವವು ಪೃಥ್ವೀಕಾಯದಲ್ಲಿ ಹೋಗಿ ಸೇರಿದಾಗ, ಅದು ಅಲ್ಲಿ ಒಂದು ಅಸಂಖ್ಯ ಕಾಲ ನಿಂತೀತು. ಒಂದು ಸಮಯ ಕೂಡ ಪ್ರಮತ್ತನಾಗ ಬೇಡ, ಗೌತಮ. (5)

ಜೀವವು ಅಪ್‌ಕಾಯದಲ್ಲಿ ಹೋಗಿ ಸೇರಿದಾಗ, ತೇಜಃಕಾಯದಲ್ಲಿ ಹೋಗಿ ಸೇರಿದಾಗ, ವಾಯುಕಾಯದಲ್ಲಿ ಹೋಗಿ ಸೇರಿದಾಗ—ಅದು ಅಲ್ಲಿ ಒಂದು ಅಸಂಖ್ಯಕಾಲ ನಿಂತೀತು. * * * [1](6, 7, 8)

ಜೀವವು ವನಸ್ಪತಿಕಾಯದಲ್ಲಿ ಹೋಗಿ ಸೇರಿದಾಗ, ಅದು ಅನಂತ ಕಾಲ ಅಲ್ಲಿ ಹಾಗೆಯೇ ಇರುವುದು; ಅನಂತರವೂ ಅದರ ಸ್ಥಿತಿ ಏನೂ ಉತ್ತಮಗೊಳ್ಳದು. * * * (9)

ಜೀವವು ಎರಡು ಇಂದ್ರಿಯಗಳ ಕಾಯದಲ್ಲಿ ಹೋಗಿ ಸೇರಿದಾಗ, ಮೂರು ಇಂದ್ರಿಯಗಳ ಕಾಯದಲ್ಲಿ ಹೋಗಿ ಸೇರಿದಾಗ, ನಾಲ್ಕು ಇಂದ್ರಿಯ

---

1 ಕೆಳಗಡೆ * * * ಈ ಚುಕ್ಕಿಯಿರುವ ಕಡೆ 'ಒಂದು ಸಮಯ ಕೂಡ ಪ್ರಮತ್ತನಾಗ ಬೇಡ, ಗೌತಮ' ಎಂಬ ಪಲ್ಲವಿ ಓದಿಕೊಳ್ಳಬೇಕು.

ಗಳ ಕಾಯದಲ್ಲಿ ಹೋಗಿ ಸೇರಿದಾಗ, ಅದು ಒಂದು ಸಂಖ್ಯೇಯದಷ್ಟು ಕಾಲ ಅಲ್ಲಿ ನಿಂತೀತು. * * * (10, 11, 12)

ಜೀವವು ಪಂಚೇಂದ್ರಿಯಕಾಯದಲ್ಲಿ ಹೋಗಿ ಸೇರಿದಾಗ, ಅದು ಅಲ್ಲಿ ಏಳೆಂಟು ಭವಗಳು ನಿಂತೀತು. * * * (13)

ಜೀವವು ದೇವ ಅಥವಾ ನೇರಯಿಕಕಾಯವನ್ನು ಹೋಗಿ ಸೇರಿದಾಗ, ಅದು ಅಲ್ಲಿ ಒಂದು ಭವ ನಿಂತೀತು. * * * (14)

ಹೀಗೆ, ಬಹುವಾದ ಪ್ರಮಾದದಿಂದ, ಶುಭಾಶುಭವಾದ ಕರ್ಮಗಳಿಂದ, ಜೀವವು ಭವಸಂಸಾರದಲ್ಲಿ ಓಡಾಡುತ್ತದೆ. * * * (15)

ಮಾನುಷತ್ವ ದೊರೆತರು ಕೂಡ ಆರ್ಯತ್ವವು ದುರ್ಲಭ; ದಸ್ಯುಗಳೂ ಮ್ಲೇಚ್ಛರೂ ಬಹುಜನ. ಒಂದು ಸಮಯ ಕೂಡ ಪ್ರಮತ್ತನಾಗದಿರು, ಗೌತಮ. (16)

ಆರ್ಯತ್ವ ದೊರೆತರೂ ಅಹೀನ ಪಂಚೇಂದ್ರಿಯತ್ವವು ದುರ್ಲಭ; ವಿಕಲೇಂದ್ರಿಯತ್ವವೇ ಕಂಡುಬರುತ್ತದೆ. * * * (17)

ಅಹೀನ ಪಂಚೇಂದ್ರಿಯತ್ವ ಲಭಿಸಿದರು ಕೂಡ ಉತ್ತಮಧರ್ಮದಲ್ಲಿ ಶ್ರುತನಾಗುವುದು ದುರ್ಲಭ; (ಬಹು) ಜನರು ಕುತೀರ್ಥವನ್ನು ಸೇವಿಸುವರು. * * * (18)

ಉತ್ತಮವಾದ ಶ್ರುತಿ ಲಭಿಸಿದರು ಕೂಡ ಅದರಲ್ಲಿ ಶ್ರದ್ಧೆಯು ದುರ್ಲಭ; (ಬಹು) ಜನರು ಮಿಥ್ಯಾತ್ವವನ್ನು ಸೇವಿಸುವರು. * * * (19)

ಧರ್ಮದಲ್ಲಿ ಶ್ರದ್ಧೆಯಿದ್ದರೂ ಅದನ್ನು ಮೈಯಿಂದ ಮುಟ್ಟುವವರು ದುರ್ಲಭ; ಇಲ್ಲಿ (ಜನರು) ಕಾಮಗುಣಗಳಲ್ಲಿ ಮೂರ್ಛೆ ಹೋದವರು. * * * (20)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ಕಿವಿಯ ಬಲ ಕಡಿಮೆಯಾಗುವುದು. ಒಂದು ಸಮಯ ಕೂಡ ಪ್ರಮತ್ತನಾಗದಿರು, ಗೌತಮ. (21)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ಕಣ್ಣಿನ ಬಲ ಕಡಿಮೆಯಾಗುವುದು. * * * (22)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ಮೂಗಿನ ಬಲ ಕಡಿಮೆಯಾಗುವುದು. * * * (23)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ನಾಲಗೆಯ ಬಲ ಕಡಿಮೆಯಾಗುವುದು. * * * (24)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ಸ್ಪರ್ಶದ ಬಲ ಕಡಿಮೆಯಾಗುವುದು. * * * (25)

ನಿನ್ನ ಅಲ್ಪ ಶರೀರವು ಮುಪ್ಪಾಗುವುದು, ಕೂದಲು ಹಳದಿಯಾಗುವುದು. ಆಗ ಸರ್ವ ಬಲವೂ ಕಡಿಮೆಯಾಗುವುದು. * * * (26)

ಅರತಿ, ಗಂಡ, ವಿಸೂಚಿಕೆ, ತೆರತೆರನಾದ ಮೃತ್ಯುಗಳು ನಿನಗೆ ಸಂಭವಿಸುವುವು. ನಿನ್ನ ಅಲ್ಪ ಶರೀರವು ಸವೆದು ನಾಶವಾಗುವುದು. * * * (27)

ಕುಮುದವು ಶರದದ[1] ನೀರನ್ನು ಹೇಗೋ ಹಾಗೆ ಆತ್ಮದ ಸ್ನೇಹಗಳನ್ನು ಕತ್ತರಿಸು. ಸರ್ವ ಸ್ನೇಹಗಳನ್ನು ಬಿಟ್ಟು, ಒಂದು ಸಮಯ ಕೂಡ ಪ್ರಮತ್ತನಾಗದಿರು, ಗೌತಮ! (28)

ಧನವನ್ನೂ ಹೆಂಡತಿಯನ್ನೂ ಬಿಟ್ಟು ಪರಿವ್ರಜಿಸಿ ಮನೆಯಿಲ್ಲದವನಾಗಿರುವೆ. ವಾಂತಿಮಾಡಿದುದನ್ನು ಮತ್ತೆ ಕುಡಿಯಬೇಡ. * * * (29)

ಮಿತ್ರಬಾಂಧವರನ್ನೂ ಕೂಡಿಟ್ಟು ವಿಪುಲವಾದ ಧನದ ರಾಶಿಯನ್ನೂ ಬಿಡು. ಅವುಗಳನ್ನು ಎರಡನೆಯ ಬಾರಿ ಅರಸಬೇಡ. * * * (30)

ಇಂದು ಜಿನನು ಇಲ್ಲ; ಬಹುಮಾನಿತನಾದ ಮಾರ್ಗದೇಶಕನಿದ್ದಾನೆ.[2] ನೇರವಾಗಿ ಒಯ್ಯುವ ದಾರಿಯಿರುವಾಗ ಒಂದು ಸಮಯ ಕೂಡ ಪ್ರಮತ್ತನಾಗದಿರು, ಗೌತಮ! (31)

ಮುಳ್ಳುಗಳಿರುವ ಮಾರ್ಗವನ್ನು ಶೋಧಿಸಿ, ಮಹಾರ್ಹವಾದ ಮಾರ್ಗವನ್ನು ಹೊಕ್ಕಿರುವೆ. ವಿಶುದ್ಧವಾದ ಮಾರ್ಗದಲ್ಲಿ ಹೋಗು. * * * (32)

---

1. ಶರತ್ಕಾಲದಲ್ಲಿ ನೀರು ಇತರ ಕಾಲಕ್ಕಿಂತ ಹೆಚ್ಚು ಸ್ವಚ್ಛವಾಗಿರುವುದು.

2. ಗೌತಮನಿಗೆ ಮೇಲಿನ ಉಪದೇಶ ಮಾಡುತ್ತಿರುವವನು ಮಹಾವೀರನಾದುದರಿಂದ ಈ ಮಾತು ಒಪ್ಪುವುದಿಲ್ಲ. ಆದರೆ ಬುದ್ಧನು ತನ್ನ ಕಡೆಗಾಲದಲ್ಲಿ 'ನನ್ನನ್ನು ಗುರುವೆಂದು ಭಾವಿಸಿ ಸಂಕೋಚಪಡಬೇಡಿ. ಸ್ನೇಹಿತನೊಡನೆ ಸ್ನೇಹಿತರಂತೆ ಮಾತನಾಡಿರಿ' ಎಂದು ಹೇಳಿದಂತೆ, ಮಹಾವೀರನು ಕೂಡ 'ತನ್ನನ್ನು ಜಿನನೆಂದು ಭಾವಿಸದೆ ಮಾರ್ಗದೇಶಕನಂತೆ ಎಣಿಸಬೇಕೆಂದು' ಹೇಳಿರಬಹುದು.

ವಿಷಮವಾದ ಮಾರ್ಗವನ್ನು ಹೊಕ್ಕು ಅಬಲನಾದ ಭಾರವಾಹಕ ನಂತೆ ಆಗಬೇಡ. ಅನಂತರ ಪಶ್ಚಾತ್ತಾಪದಿಂದ ತಪಿಸುವೆ. * * * (33)

ಮಹಾ ಸಮುದ್ರವನ್ನು ದಾಟಿರುವೆ. ಮತ್ತೇಕೆ ತೀರದ ಬಳಿ ನಿಂತಿರುವೆ? ಪಾರಕ್ಕೆ ಹೋಗಲು ತ್ವರೆಮಾಡು. * * * (34)

ಅಕಲೇವರಶ್ರೇಣಿ[1]ಯನ್ನು ಅನುಸರಿಸಿದರೆ, ಗೌತಮ, ಅನುತ್ತರವಾದ ಕ್ಷೇಮ ಶಿವಗಳನ್ನುಳ್ಳ ಸಿದ್ಧಿಯ ಲೋಕಕ್ಕೆ ಹೋಗುವೆ. * * * (35)

ಬುದ್ಧನಾಗಿ ಪರಿನಿರ್ವೃತನಾದವನು, ಗ್ರಾಮದಲ್ಲಿರಲಿ ನಗರದಲ್ಲಿರಲಿ, ಸಂಯಮಿಯಾಗಿ ತಿರುಗಬೇಕು; ಶಾಂತಿಮಾರ್ಗವನ್ನು ಹರಡ ತಿಳಿಸಬೇಕು. * * * (36)

ಬುದ್ಧನು[2] ಚೆನ್ನಾಗಿ ತಿಳಿಸಿದ ಅರ್ಥಪದಗಳಿಂದ ಶೋಭಿತವಾದ ಮಾತನ್ನು ಅವಧರಿಸಿ, ಗೌತಮನು ರಾಗದ್ವೇಷಗಳನ್ನು ಕತ್ತರಿಸಿ ಸಿದ್ಧಿಗತಿಗೆ ಹೋದನು. (37)

ಎಂದು ಹೇಳುತ್ತೇನೆ.[3]

---

1. ಕೇವಲಿಗಳಾಗಿ ಮುಕ್ತರಾದ ಸಿದ್ಧರು ಕಳೇಬರವನ್ನು ಕಳಕೊಂಡವರು. ಅಂಶಹವರ ಶ್ರೇಣಿಯನ್ನು, ಎಂದರೆ ಸಿದ್ಧರಾದವರು ಅನುಸರಿಸಿದ ದಾರಿಯನ್ನು ಅನುಸರಿಸಿದರೆ . . . .

2. ಕ್ವಚಿತ್ತಾಗಿ ಮಹಾವೀರನನ್ನು 'ಬುದ್ಧ' ಎನ್ನುವರು.

3. ಇದು ಪ್ರತಿ ಸೂತ್ರದ ಕೊನೆಗೆ ಬರುತ್ತದೆ. ಸುಧರ್ಮಾಚಾರ್ಯನು ತನ್ನ ಶಿಷ್ಯನಾದ ಜಂಬೂಸ್ವಾಮಿಗೆ ಇದನ್ನು ಹೇಳಿದನೆಂದು ತಿಳಿಯಬೇಕು. (ವರ್ಧಮಾನ ಸ್ವಾಮಿಯ ಮುಖ್ಯ ಶಿಷ್ಯ ಗೌತಮ; ಅವನ ಶಿಷ್ಯ ಆಚಾರ್ಯ ಸುಧರ್ಮ.)

## ೭. ಟಗರು

(‘ಏಲಕ’ ಎಂಬ ಏಳನೆಯ ಅಧ್ಯಯನ.)

ಬರುವ ಅತಿಥಿಯನ್ನು ಉದ್ದೇಶಿಸಿ ಯಾರಾದರೂ ಎಳೆಯ ಟಗರನ್ನು ಪೋಷಿಸುವರು. ಅನ್ನ ದವಸಗಳನ್ನು ಕೊಟ್ಟು ಸ್ವಂತ ಅಂಗಳದಲ್ಲಿ ಬೆಳೆಸುವರು. (1)

ಅದು ಬೆಳೆದು, ದೊಡ್ಡದಾಗಿ, ಕೊಬ್ಬಿ, ಹೊಟ್ಟೆದೊಡ್ಡದಾಗಿ, ಬೊಜ್ಜು ಬೆಳೆದು, ಮೈ ತುಂಬಿದಾಗ ಬರುವವನಿಗೆ ಸಿದ್ಧವಾಗಿರುವುದು. (2)

ಬರುವವನು ಬರದಿರುವವರೆಗೆ ಆ ದುಃಖಿಯು ಬದುಕಿರುವುದು. ಬರುವವನು ಬಂದಾಗ, ಅದರ ತಲೆ ಕಡಿದು, ತಿನ್ನುವರು. (3)

ಬರುವವನಿಗಾಗಿ ಆ ಟಗರನ್ನು ಚೆನ್ನಾಗಿ ಸಾಕುವಂತೆ, ಅಧರ್ಮಿಷ್ಠನಾದ ಅಜ್ಞಾನಿಯು ನರಕದಲ್ಲಿನ ಆಯುಸ್ಸನ್ನು ಬಯಸುವನು. (4)

ಅಜ್ಞಾನಿಯು ಹಿಂಸಿಸುವನು, ಸುಳ್ಳು ಹೇಳುವನು, ದಾರಿಕಾಯುವನು, ಇತರರ ವಸ್ತುಗಳನ್ನು ಕದಿಯುವನು, ಮೋಸಮಾಡುವನು; ಶಠನಾಗಿ ಲೂಟಮಾಡುವುದನ್ನೇ ಯೋಚಿಸುತ್ತಿರುವನು. (5)

ಸ್ತ್ರೀಯರನ್ನೂ ವಿಷಯಗಳನ್ನೂ ಬಯಸಿ, ಮಹಾ ಆರಂಭಗಳನ್ನು ಹಿಡಿದು, ಸುರೆ ಮಾಂಸಗಳನ್ನು ಸೇವಿಸಿ, ಬೆಳೆದು, ಇತರರನ್ನು ದಮನ ಮಾಡುವನು. (6)

ಗರಿಗರಿಯಾದ ಅಜಮಾಂಸವನ್ನು ತಿಂದು, ಅವನ ಹೊಟ್ಟೆ ಬೆಳೆಯುವುದು, ರಕ್ತನಾಳಗಳಲ್ಲಿ ರಕ್ತ ತುಂಬುವುದು. ಅದರಿಂದ, ಬರುವವನಿಗಾಗಿ ಬೆಳೆಸಿದ ಏಳಕದಂತೆ, ಅವನಿಗೆ ನರಕದಲ್ಲಿ ಬದುಕಲ್ಲದೆ ಬೇರೆ(ಗತಿ)ಯಿಲ್ಲ. (7)

ಆಸನ ಶಯನ ಯಾನ ವಿತ್ತ ಕಾಮಗಳನ್ನು ಭುಂಜಿಸಿ, ಕಷ್ಟಪಟ್ಟು ಕೂಡಿಸಿದ ಧನವನ್ನು ಪೋಲುಮಾಡಿ, ಬಹಳ ಕೊಳೆಗಳನ್ನು ಕೂಡಿಹಾಕಿ, (8)

ಆ ಜಂತುವು ಕರ್ಮದ ಭಾರಕ್ಕೆ ಒಳಗಾಗಿ, ಪ್ರತ್ಯುತ್ಪನ್ನ[1] ಪರಾಯಣನಾಗಿ, ಅತಿಥಿ ಬಂದ ವೇಳೆಯ ಅಜದಂತೆ ಮರಣಾಂತದಲ್ಲಿ ಶೋಕಿಸುವನು. (9)

---

1. ಮುಂದಿನದನ್ನು ಯೋಚಿಸದೆ, ಅಂದಿನದನ್ನು ಮಾತ್ರ ನೆನೆವು.

ಜೀವಿಗಳನ್ನು ಕೊಲ್ಲುವ ಅಜ್ಞಾನಿಯು ಆಯುಸ್ಸು ಪರಿಕ್ಷಯಿಸಲು ಚ್ಯುತಿಹೊಂದಿ, ಅವಶನಾಗಿ[1] ಕತ್ತಲೆ ತುಂಬಿದ ಆಸುರೀದಿಕ್ಕಿಗೆ ಹೋಗುವನು. (10)

ಮನುಷ್ಯನು ಒಂದು ಕಾಕಿನಿ[2]ಗಾಗಿ ಸಹಸ್ರವನ್ನು ಕಳೆದುಕೊಳ್ಳುವಂತೆ, ಅಪಥ್ಯವಾದ ಮಾವನ್ನು ತಿಂದು ರಾಜನು ರಾಜ್ಯವನ್ನು ಕಳೆದುಕೊಂಡಂತೆ—(11)

ಹಾಗೆಯೇ, ಮಾನುಷಕಾಮಗಳನ್ನೂ ದೇವಕಾಮಗಳನ್ನೂ ಹೋಲಿಸಿದರೆ, ದಿವ್ಯವಾದ ಆಯುಸ್ಸೂ ಕಾಮಗಳೂ ಸಾವಿರ ಪಾಲು ಮೇಲು. (12)

ಪ್ರಜ್ಞಾವಂತರು ಅನೇಕ ನಯುತ[3]ವರ್ಷಗಳು ಸ್ಥಿರವಾಗಿರುವರು. ನೂರು ವರ್ಷಗಳಿಗಿಂತ ಕಡಿಮೆ ಆಯುಸ್ಸಿನಲ್ಲಿ ದುರ್ಮೇಧರು ಅಷ್ಟು ಕಳೆದುಕೊಳ್ಳುವರು! (13)

ಮೂವರು ವಣಿಜರು ಮೂಲವನ್ನು ತೆಗೆದುಕೊಂಡು ಹೊರಟರು. ಅಲ್ಲಿ ಒಬ್ಬನಿಗೆ ಲಾಭ ದೊರಕಿತು. ಒಬ್ಬನು ಮೂಲದೊಡನೆ ಬಂದನು. (14)

ಒಬ್ಬ ವಣಿಜನು ಮೂಲವನ್ನೂ ಕಳೆದುಕೊಂಡು ಹಿಂದಿರುಗಿ ಬಂದನು. ಇದು ವ್ಯವಹಾರದ ಉಪಮಾನ. ಹೀಗೆ ಧರ್ಮದಲ್ಲಿ ತಿಳಿಯಿರಿ. (15)

ಮೂಲವು ಮಾನುಷತ್ವ, ಲಾಭವು ದೇವಗತಿ.

ಮೂಲದ ನಾಶದಿಂದ ಜೀವಿಗಳಿಗೆ ನರಕತಿರ್ಯಕ್ತ್ವಗಳು ಶಾಶ್ವತ. (16)

ಬಾಲನಿಗೆ ಎರಡು ಗತಿ: ಆಪತ್ತು ಮತ್ತು ವಧೆ. ತನ್ನ ಲೋಲುಪತೆಗಳಿಗೆ ಸೋತವನು ದೇವತ್ವ ಮಾನುಷತ್ವಗಳನ್ನು ಕಳೆದುಕೊಂಡವನು. (17)

ಅವುಗಳನ್ನು ಒಮ್ಮೆ ಕಳೆದುಕೊಂಡವನು ಎರಡು ವಿಧದ ದುರ್ಗತಿಗಳಿಗೆ ಹೋಗುವನು. ಬಹುಕಾಲದವರೆಗೆ ಅವನಿಗೆ ಮೇಲುಮಾರ್ಗ[4]ವು ದುರ್ಲಭ. (18)

---

1. ತನಗೆ ತಾನು ವಶನಲ್ಲದೆ, ಕರ್ಮಕ್ಕೆ ವಶನಾಗಿ. 2. ಸುಮಾರು ಎರಡಾಣೆ ಬೆಲೆಯ ನಾಣ್ಯ. 3. 1 ನಯುತ = 49,786,136,000,000,000,000,000,000,000,000. 4. ದೇವ, ಮಾನುಷ ಗತಿ.

ಹೀಗೆ, ಜಯವಾವುದೆಂಬುದನ್ನು ಕಂಡು ಅಜ್ಞಾನವನ್ನೂ ಪಾಂಡಿತ್ಯವನ್ನೂ ತೂಗಬೇಕು.

ಮೂಲದೊಡನೆ ಪ್ರವೇಶಿಸುವವನು ಮಾನುಷಯೋನಿಗೆ ಹೋಗುವನು. (19)

ಸಾಮಾನ್ಯವಾದ ಶಿಕ್ಷೆಗಳಿಂದ ಸುವ್ರತರಾಗಿ ಗೃಹಸ್ಥರಾಗುವ ಜನರು ಪುನಃ ಮನುಷ್ಯಯೋನಿಯನ್ನು ಸೇರುವರು. ಪ್ರಾಣಿಗಳು ಕರ್ಮಗಳಿಗೆ ಸಿಕ್ಕಿದವರು. (20)

ವಿಶೇಷವಾದ ಶಿಕ್ಷೆಗಳುಳ್ಳವರು ಮೂಲವನ್ನು ಹೆಚ್ಚು ಮಾಡಿದವರು. ಶೀಲವಂತರಾದ ಆ ಉತ್ತಮರು ದೈನ್ಯವಿಲ್ಲದೆ ದೇವತ್ವಕ್ಕೆ ಹೋಗುವರು. (21)

ಭಿಕ್ಷುವೂ ಗೃಹಸ್ಥನೂ ಹೀಗೆ ದೈನ್ಯವಿಲ್ಲದಿರುವುದನ್ನು ತಿಳಿದು, ಈ ತೆರನಾಗಿ ಕಳೆದುಕೊಳ್ಳುತ್ತಿದ್ದರೂ ಕಳೆದುಕೊಳ್ಳುತ್ತಿರುವುದನ್ನು ತಿಳಿಯದೆ ಹೇಗೆ ಇದ್ದಾನು? (22)

ಸಮುದ್ರದೊಡನೆ ಹೋಲಿಸಿದರೆ ದರ್ಭೆಯ ತುದಿಯ ನೀರು ಮರೆಯಾಗುವಂತೆ, ದೇವ ಕಾಮಗಳೊಡನೆ ಹೋಲಿಸಿದರೆ ಮಾನುಷ ಕಾಮಗಳು ಮರೆಯಾಗುವುವು. (23)

ಈ ಪರಿಮಿತವಾದ ಆಯುಸ್ಸಿನ ಈ ಕಾಮಗಳು ದರ್ಭೆಯ ತುದಿಯ ನೀರಿನಷ್ಟು. ಯಾವುದಕ್ಕಾಗಿ ಇದನ್ನು ಪುರಸ್ಕರಿಸಿ, ಯೋಗಕ್ಷೇಮವನ್ನು ತಿಳಿಯದಿದ್ದಾನು? (24)

ಕಾಮಗಳಿಂದ ವಿಮುಖನಾಗದವನು ಆತ್ಮಾರ್ಥಕ್ಕೆ ಅಪರಾಧ ಮಾಡುವನು. ನೇರವಾಗಿ ಒಯ್ಯುವ ಮಾರ್ಗವನ್ನು ಕೇಳಿ ಕೂಡ ಪುನಃ ಪುನಃ ದಾರಿಬಿಟ್ಟು ಹೋಗುವನು. (25)

ಕಾಮಗಳನ್ನು ಬಿಟ್ಟು ತಿರುಗಿದವನು ಆತ್ಮಾರ್ಥಕ್ಕೆ ಅಪರಾಧ ಮಾಡನು. "ಕಶ್ಮಲವಾದ ದೇಹವನ್ನು ಬಿಡುವುದರಿಂದ ದೇವನಾಗುವೆನೆಂದು ನಾನು ಕೇಳಿದ್ದೇನೆ" ಎಂದುಕೊಳ್ಳುವನು. (26)

ಋದ್ಧಿ, ದ್ಯುತಿ, ಯಶಸ್ಸು, ವರ್ಣ, ಆಯುಸ್ಸು, ಅನುತ್ತರವಾದ ಸುಖಗಳು ಹೆಚ್ಚಾಗಿರುವ ಮನುಷ್ಯರಲ್ಲಿ ಅವನು ಹುಟ್ಟುವನು. (27)

ಅಧರ್ಮದಲ್ಲಿ ನಡೆಯುವ ಬಾಲನ ಬಾಲತ್ವವನ್ನು ನೋಡು. ಅಧರ್ಮಿಷ್ಠನು ಧರ್ಮವನ್ನು ಬಿಟ್ಟು ನರಕದಲ್ಲಿ ಹುಟ್ಟುವನು. (28)

ಸರ್ವಧರ್ಮಗಳನ್ನು ಅನುಸರಿಸಿ ನಡೆವ ಧೀರನ ಧೀರತ್ವವನ್ನು ನೋಡು. ಧರ್ಮಿಷ್ಠನು ಅಧರ್ಮವನ್ನು ಬಿಟ್ಟು ದೇವರಲ್ಲಿ ಹುಟ್ಟುವನು. (29)

ಪಂಡಿತನು ಬಾಲಭಾವವನ್ನೂ ಅಬಾಲ್ಯವನ್ನೂ ತೂಗಿನೋಡಿ; ಮುನಿಯಾದವನು ಬಾಲಭಾವವನ್ನು ಬಿಟ್ಟು ಅಬಾಲ್ಯವನ್ನು ಸೇವಿಸುವನು. (30)

ಎಂದು ಹೇಳುತ್ತೇನೆ.

## ೩. ತುಂಟ ಗೂಳಿ

('ಖಲುಂಕೀಯು' ಎಂಬ ಇಪ್ಪತ್ತೇಳನೆಯ ಅಧ್ಯಯನ.)

ಸ್ಥವಿರನೂ ಗಣಧರ[1]ನೂ ಆದ ಗರ್ಗನೆಂಬ ವಿಶಾರದನಾದ ಮುನಿಯಿದ್ದನು. ಒಂದು ಸಲ ಆ ಗಣದ ಮುಖಂಡನಿಗೆ ಹೀಗೆನಿಸಿತು: (1)

"ವಾಹನದಲ್ಲಿ ಏರಿದವನು ಕಾಂತಾರವನ್ನು ದಾಟುವನು. ಯೋಗವನ್ನು ವಾಹನಮಾಡಿಕೊಂಡವನು ಸಂಸಾರವನ್ನು ದಾಟುವನು. (2)

"ತುಂಟ ಗೂಳಿಯನ್ನು (ವಾಹನಕ್ಕೆ) ಕಟ್ಟಿದವನು (ಅವುಗಳನ್ನು) ಬಡಿದು ಕ್ಲೇಶಪಡುವನು. ಅಸಮಾಧಿಯನ್ನು ಅನುಭವಿಸುವನು. ಅವನ ಬಡಿಗೋಲು ಚೂರಾಗುವುದು. (3)

"(ಒಂದು) ಒಂದರ ಬಾಲವನ್ನು ಕಚ್ಚುವುದು. ಇನ್ನೊಂದನ್ನು ಗಾಯಗೊಳಿಸುವುದು. ಒಂದು ನೊಗದ ಕೀಲಕವನ್ನು ಮುರಿಯುವುದು. ಒಂದು ದಾರಿಬಿಟ್ಟು ಹೋಗುವುದು. (4)

"ಒಂದು ಮಗ್ಗುಲಾಗಿ ಬೀಳುವುದು, ಕುಳಿತು ಬಿಡುವುದು, ಅಥವಾ ಮಲಗಿ ಬಿಡುವುದು. ಮೇಲೆ ಹಾರುವುದು, ನೆಗೆಯುವುದು. ಮೊಂಡುತನದಿಂದ ಚಿಕ್ಕ ಹಸುವಿನ ಹಿಂದೆ ಹೋಗುವುದು. (5)

"ಹಾಯುವುದಕ್ಕೆ ತಲೆಯನ್ನು ತಗ್ಗಿಸಿ ಕೋಪಗೊಂಡು ನುಗ್ಗುವುದು, ಹಿಂದೆ ಹೋಗುವುದು. ಸತ್ತಂತೆ ನಿಂತುಬಿಡುವುದು. ಅಥವಾ ವೇಗದಿಂದ ಓಡುವುದು. (6)

ಹಾಳುಜಂತುವು ಹಗ್ಗವನ್ನು ಕಿತ್ತುಬಿಡುವುದು. ದುರ್ದಾಂತವಾಗಿ ಯುಗವನ್ನು ಮುರಿಯುವುದು. ಗುಟುರು ಹಾಕಿಕೊಂಡು ಕಟ್ಟು ಕಿತ್ತು ಓಡಿಬಿಡುವುದು. (7)

"ಯಾನಕ್ಕೆ ಜೋಡಿಸಿದ ತುಂಟ ಗೂಳಿಗಳು ಹೇಗೋ ಧರ್ಮಯಾನಕ್ಕೆ ಜೋಡಿಸಿದ ದುಃಶಿಷ್ಯರು ಹಾಗೆ. ಧೃತಿಯಲ್ಲಿ ದುರ್ಬಲರಾದ ಅವರು ಚೂರಾಗುವರು. (8)

---

1. ಇಲ್ಲಿ, ಗಣಧರನೆಂದರೆ ತೀರ್ಥಂಕರನ ಶಿಷ್ಯನಲ್ಲ; ಗಣದ ಮುಖಂಡನೆಂದರ್ಥ.

"ಕೆಲವರು ತಮ್ಮ ಋದ್ಧಿಯನ್ನು ಗೌರವಿಸುವರು. ಕೆಲವರು ರಸವನ್ನು ಗೌರವಿಸುವರು. ಕೆಲವರು ತಮ್ಮ ಸೌಖ್ಯಗಳನ್ನು ಗೌರವಿಸುವರು. ಕೆಲವರು ತಮ್ಮ ಕ್ರೋಧವನ್ನು ಬೆಳಸುವರು. (9)

"ಕೆಲವರಿಗೆ ಭಿಕ್ಷೆಯಲ್ಲಿ ಆಲಸ್ಯ. ಕೆಲವರು ಅವಮಾನಕ್ಕೆ ಬೆದರುವರು. ಕೆಲವರು ಸ್ತಬ್ಧರು. ಅವರನ್ನು ಹೇತು ಕಾರಣಗಳಿಂದ ಒಪ್ಪಿಸುವುದು ಹೇಗೆ? (10)

"ಅವರು ಪ್ರತಿಮಾತನ್ನು ಆಡುವರು. ದೋಷಗಳನ್ನೇ ತೋರಿಸುವರು. ಆಗಾಗ್ಗೆ ಆಚಾರ್ಯರ ಮಾತಿಗೆ ಪ್ರತಿಕೂಲವಾಗಿ ನಡೆಯುವರು. (11)

"'ಅವಳು ನನ್ನನ್ನು ಅರಿಯಳು; ಅವಳು ನನಗೆ ಕೊಡುವುದಿಲ್ಲ; ಹೊರಗೆ ಹೋಗಿದ್ದಾಳು; ಬೇರೆ ಸಾಧುವನ್ನು ಕಳುಹಿಸು' [—ಎಂದು ಎಲ್ಲಿಯಾದರೂ ಹೋಗೆಂದರೆ ಹೇಳುವರು]. (12)

"ಕಾರ್ಯಾರ್ಥವಾಗಿ ಕಳುಹಿಸಿದರೆ ಹರಟುವರು; ಚೆನ್ನಾಗಿ ಸುತ್ತಾಡುವರು. ತಾವು ರಾಜನ ಪರಿವಾರದವರೆಂದು ತಿಳಿದು ಹುಬ್ಬು ಗಂಟು ಹಾಕುವರು. (13)

"ಕಲಿಸಿ, ಸಂಘಕ್ಕೆ ಸೇರಿಸಿಕೊಂಡು, ಅನ್ನಪಾನಗಳಿಂದ ಪೋಷಿಸಿದ ನಂತರ ರೆಕ್ಕೆ ಹುಟ್ಟಿದ ಹಂಸಗಳಂತೆ ದಿಕ್ಕಾಪಾಲಾಗಿ ಹೊರಟುಹೋಗುವರು." (14)

ಆಗ, ತುಂಟ ಗೂಳಿಗಳು ಸೇರಿದ ಈ ಸಾರಥಿಯು "ದುಷ್ಟಶಿಷ್ಯರೊಡನೆ ನನಗೇನು? ನನ್ನ ಆತ್ಮ ಕುಗ್ಗಿಹೋಗಿದೆ. (15)

"ನನ್ನ ದುಷ್ಟ ಶಿಷ್ಯರು ಹೇಗೋ ತುಂಟ ಗೂಳಿಗಳು ಹಾಗೆ. ಈ ಮೈಗಳ್ಳ ಕತ್ತೆಗಳನ್ನು ಬಿಟ್ಟು ದೃಢವಾದ ತಪಸ್ಸನ್ನು ಹಿಡಿಯುವೆನು" ಎಂದು ಚಿಂತಿಸಿದನು. (16)

ಆ ಮಹಾತ್ಮನು ಮೃದುಮಾರ್ದವ ಸಂಪನ್ನನಾಗಿ, ಗಂಭೀರನಾಗಿ, ಸುಸಮಾಹಿತನಾಗಿ, ಶೀಲಗಳೊಡಗೂಡಿದ ಆತ್ಮದಿಂದ ಭೂಮಿಯಲ್ಲಿ ವಿಹರಿಸುತ್ತಿದ್ದನು. (17)

ಎಂದು ಹೇಳುತ್ತೇನೆ.

## ೪. ನಮಿಯ ಪ್ರವ್ರಜ್ಯ

('ನಮಿಪ್ರವ್ರಜ್ಯ' ಎಂಬ ಒಂಬತ್ತನೆಯ ಅಧ್ಯಯನ.)

(ಭಗವಂತನಾದ ನಮಿಯು) ದೇವಲೋಕದಿಂದ ಚ್ಯುತಿಹೊಂದಿ, ಮನುಷ್ಯಲೋಕದಲ್ಲಿ ಹುಟ್ಟಿ, ಮೋಹನೀಯವನ್ನು ಉಪಶಮಗೊಳಿಸಿ, ಹಿಂದಿನ ಜನ್ಮವನ್ನು ಸ್ಮರಿಸಿದನು. (1)

ತನ್ನ ಪೂರ್ವಜನ್ಮವನ್ನು ಸ್ಮರಿಸಿ, ಭಗವಂತನು, ಅನುತ್ತರವಾದ ಧರ್ಮದಲ್ಲಿ ಸ್ವಯಂಸಂಬುದ್ಧ[1]ನಾಗಿ, ಮಗನನ್ನು ರಾಜ್ಯದಲ್ಲಿ ನಿಲ್ಲಿಸಿ, ನಮಿ ರಾಜನು ಅಭಿನಿಷ್ಕ್ರಮಿಸಿದನು. (2)

ಶ್ರೇಷ್ಠವಾದ ಅಂತಃಪುರದಲ್ಲಿ ದೇವಲೋಕಸದೃಶವಾದ ಭೋಗಗಳನ್ನು ಸವಿದು, ನಮಿರಾಜನು, ಬುದ್ಧನಾಗಿ ಭೋಗಗಳನ್ನು ಪರಿತ್ಯಾಗ ಮಾಡಿದನು. (3)

ಪುರಜನಪದಗಳೊಡನೆ ಮಿಥಿಲೆಯನ್ನೂ ಸೈನ್ಯವನ್ನೂ ರಾಣಿವಾಸವನ್ನೂ ಸರ್ವ ಪರಿಜನವನ್ನೂ ಬಿಟ್ಟು ಅಭಿನಿಷ್ಕ್ರಮಿಸಿ, ಭಗವಂತನು ಏಕಾಂತದಲ್ಲಿ ನೆಲಸಿದನು. (4)

ರಾಜರ್ಷಿಯಾದ ನಮಿಯು ಅಭಿನಿಷ್ಕ್ರಮಿಸಿದಾಗ, ಪರಿವ್ರಜಿಸಿದಾಗ, ಮಿಥಿಲೆಯಲ್ಲಿ ಕೋಲಾಹಲವಾಯಿತು. (5)

ಉತ್ತಮವಾದ ಪ್ರವ್ರಜ್ಯಾಸ್ಥಾನವನ್ನು ಪಡೆದ ರಾಜರ್ಷಿಯನ್ನು ಸಮೀಪಿಸಿ, ಶಕ್ರನು ಬ್ರಾಹ್ಮಣರೂಪದಿಂದ ಈ ಮಾತು ಹೇಳಿದನು: (6)

"ಇದೇಕೆ, ಆರ್ಯ? ಮಿಥಿಲೆಯು ಕೋಲಾಹಲದಿಂದ ತುಂಬಿದೆ? ಪ್ರಾಸಾದಗಳಲ್ಲಿಯೂ ಗೃಹಗಳಲ್ಲಿಯೂ ದಾರುಣವಾದ ಶಬ್ದಗಳು ಕೇಳಿ ಬರುತ್ತವೆ?" (7)

ರಾಜರ್ಷಿ ನಮಿಯು ಇದನ್ನು ಕೇಳಿ, ಹೇತುಕಾರಣಗಳನ್ನು ಅನುಸರಿಸಿ ದೇವೇಂದ್ರನಿಗೆ ಹೀಗೆ ಹೇಳಿದನು: (8)

"ಮಿಥಿಲೆಯಲ್ಲಿ, ಶೀತವಾದ ನೆರಳುಕೊಡುವ ಮನೋರಮವೆಂಬ ಚೈತ್ಯ[2]ವೃಕ್ಷವು ಪತ್ರ ಪುಷ್ಪ ಫಲಗಳಿಂದ ಕೂಡಿ ಅನೇಕ ಹಕ್ಕಿಗಳಿಗೆ ಸದಾ ಆಶ್ರಯವಾಗಿದೆ. (9)

1. ಇತರರ ಅನುಶಾಸನೆಗಳನ್ನು ಆಶ್ರಯಿಸದೆ, ತಾನೆ ತನ್ನ ಸ್ವಪ್ರಯತ್ನದಿಂದ ಕೇವಲ ಜ್ಞಾನ ಪಡೆದವನು. 2. ಇಲ್ಲಿ, ಚೈತ್ಯವೆಂದರೆ ಪವಿತ್ರವಾದ ವೃಕ್ಷವೆಂದು ತಿಳಿಯಬೇಕು.

"ಮನೋರಮವೆಂಬ ಚೈತ್ಯವು ಗಾಳಿಯಿಂದ ಅಳ್ಳಾಡಿಸಲ್ಪಟ್ಟಿದೆ. ಅದರಿಂದ ಹಕ್ಕಿಗಳು ದುಃಖಗೊಂಡು ಆಶ್ರಯವಿಲ್ಲದೆ ಆರ್ತವಾಗಿ ಕೂಗಿ ಕೊಳ್ಳುವುವು." (10)

ದೇವೇಂದ್ರನು ಇದನ್ನು ಕೇಳಿ, ಹೇತುಕಾರಣಗಳನ್ನು ಅನುಸರಿಸಿ ರಾಜರ್ಷಿ ನಮಿಗೆ ಹೀಗೆಂದನು: (11)

"ಇದು ಬೆಂಕಿ, ಗಾಳಿ; ನಿನ್ನ ಮಂದಿರವನ್ನು ದಹಿಸುತ್ತಿದೆ! ಭಗ ವನ್, ನಿನ್ನ ಅಂತಃಪುರವನ್ನು ನೀನೇಕೆ ನೋಡಿಕೊಳ್ಳುವುದಿಲ್ಲ?" (12)

ನಮಿಯು (ಮೇಲೆ 8ರಂತೆ) ಹೀಗೆಂದನು: (13)

"ನಮ್ಮದಾಗಿ ಕಿಂಚಿತ್ತೂ ಇಲ್ಲದ ನಾವು ಸುಖವಾಗಿ ವಾಸಿಸುವೆವು, ಜೀವಿಸುವೆವು. ಮಿಥಿಲೆಯು ಸುಟ್ಟುಹೋಗುತ್ತಿದ್ದರೆ, ನನ್ನದು ಯಾವುದೂ ಸುಟ್ಟುಹೋಗುತ್ತಿಲ್ಲ. (14)

"ಮಕ್ಕಳು ಹೆಂಡಿರನ್ನು ಬಿಟ್ಟು, ನಿರ್ವ್ಯಾಪಾರನಾದ ಭಿಕ್ಷುವು ಪ್ರಿಯ ವಾದುದನ್ನು ತಿಳಿಯನು, ಅಪ್ರಿಯವಾದುದನ್ನೂ ತಿಳಿಯನು. (15)

"ಮನೆಯಿಲ್ಲದ ಭಿಕ್ಷುವಿಗೆ, ಸಕಲ ಕಡೆಗಳಲ್ಲಿಯೂ ಬಿಡುಗಡೆ ಪಡೆದವ ನಿಗೆ, ತನ್ನ ಏಕಾಂತತೆಯನ್ನು ಕಂಡವನಿಗೆ, ಬಹಳ ಮಂಗಲ ಉಂಟು." (16)

ಇಂದ್ರನು (ಮೇಲೆ 11ರಂತೆ) ಹೀಗೆಂದನು: (17)

"ಪ್ರಾಕಾರವನ್ನು, ಗೋಪುರ ಅಟ್ಟಾಲಕಗಳನ್ನು ಮಾಡಿಸು. ಅಗಳು ಅಗೆಸು. ಶತಘ್ನಿಗಳನ್ನು ಎತ್ತಿಸು. ಆಗ ನೀನು ಕ್ಷತ್ರಿಯನಾಗುವೆ." (18)

ನಮಿಯು (8ರಂತೆ) ಹೀಗೆಂದನು: (19)

"ಶ್ರದ್ಧೆಯನ್ನು ಕೋಟೆಯಾಗಿ, ತಪಸ್ಸು ಸಂವರಗಳನ್ನು ಅಗಳಾಗಿ, ಕ್ಷಾಂತಿಯನ್ನು ನಿಪುಣವಾದ ಪ್ರಾಕಾರವಾಗಿ ಮಾಡಿ,—ಹೀಗೆ ಮೂರು ಗುಪ್ತಿಗಳಿಂದ ಮುರಿಯಲು ಅಸಾಧ್ಯವಾಗುವುದು. (20)

"ಪರಾಕ್ರಮವನ್ನು ಧನುಸ್ಸಾಗಿಯೂ ಈರ್ಯವನ್ನು ಸದಾ ಹಗ್ಗವನ್ನಾ ಗಿಯೂ ಮಾಡಿ, ಧೃತಿಯನ್ನು ಕೇತನವನ್ನಾಗಿ ಮಾಡಿ, ಸತ್ಯದಿಂದ ಅದನ್ನು ಬಗ್ಗಿಸಿ, (21)

"ತಪಸ್ಸೆಂಬ ಬಾಣವನ್ನು ಹೂಡಿ, ಕರ್ಮವೆಂಬ ಕಂಚುಕವನ್ನು ಭೇದಿಸಿ, ಮುನಿಯಾದವನು ಸಂಗ್ರಾಮದಲ್ಲಿ ವಿಜಯಿಯಾಗಿ ಭವದಿಂದ ಬಿಡುಗಡೆ ಪಡೆಯುವನು." (22)

ಇಂದ್ರನು (ಮೇಲೆ 11ರಂತೆ) ಹೀಗೆಂದನು: (23)

"ಪ್ರಾಸಾದಗಳನ್ನೂ ವರ್ಧಮಾನಗೃಹ[1]ಗಳನ್ನೂ ಬಾಲಾಗ್ರಪೋತಿಕ[2]ಗಳನ್ನೂ ಮಾಡಿಸು. ಅದರಿಂದ ನೀನು ಕ್ಷತ್ರಿಯನಾಗುವೆ." (24)

ನಮಿಯು (ಮೇಲೆ 8ರಂತೆ) ಹೀಗೆಂದನು: (25)

"ಮಾರ್ಗದಲ್ಲಿ ಮನೆಮಾಡುವವನು ಕಷ್ಟಕ್ಕೆ ಈಡಾಗುವನು. (ಆದರೆ ನಾನು) ಎಲ್ಲಿಗೆ ಹೋಗಬೇಕೆಂದು ಬಯಸಿದರಲ್ಲಿ ನೆಲೆಮಾಡಬಹುದು." (26)

ಇಂದ್ರನು (ಮೇಲೆ 11ರಂತೆ) ಹೀಗೆಂದನು: (27)

"ಕಳ್ಳರನ್ನೂ ದರೋಡೆಕಾರರನ್ನೂ ಗಂಟುಕಳ್ಳರನ್ನೂ ಮನೆಮುರುಕರನ್ನೂ ತಡೆದು ನಗರವನ್ನು ಕ್ಷೇಮವಾಗಿ ಮಾಡು. ಅದರಿಂದ ನೀನು ಕ್ಷತ್ರಿಯನಾಗುವೆ." (28)

ನಮಿಯು (ಮೇಲೆ 8ರಂತೆ) ಹೀಗೆಂದನು: (29)

"ಜನರು ಅನೇಕ ಸಾರಿ ಸುಳ್ಳು ಶಿಕ್ಷೆಯನ್ನು ಪ್ರಯೋಗಿಸುವರು; ಮಾಡದವರನ್ನು ಬಂಧಿಸುವರು, ಮಾಡಿದವರನ್ನು ಬಿಡುಗಡೆಮಾಡುವರು." (30)

ಇಂದ್ರನು (ಮೇಲೆ 11ರಂತೆ) ಹೀಗೆಂದನು: (31)

"ನರಾಧಿಪ! ನಿನಗೆ ನಮಿಸದ ಪಾರ್ಥಿವರನ್ನೆಲ್ಲ ವಶಪಡಿಸಿ ನಿಲ್ಲಿಸು. ಅದರಿಂದ ನೀನು ಕ್ಷತ್ರಿಯನಾಗುವೆ." (32)

ನಮಿಯು (ಮೇಲೆ 8ರಂತೆ) ಹೀಗೆಂದನು: (33)

"ಸಂಗ್ರಾಮದಲ್ಲಿ ಸಾವಿರ ಸಾವಿರ ದುರ್ಜಯರನ್ನು ಜಯಿಸಿದರೂ, ಆತ್ಮವೊಂದನ್ನು ಜಯಿಸಿದರೆ, ಅವನ ಜಯ ಪರಮವಾದದ್ದು. (34)

"ಆತ್ಮನೊಡನೆಯೆ ಯುದ್ಧಮಾಡು. ಹೊರಗಿನವರೊಡನೆ ನಿನಗೇಕೆ ಯುದ್ಧ? ಆತ್ಮದಿಂದಲೇ ಆತ್ಮವನ್ನು ಜಯಿಸಿದವನು ಸುಖಪಡೆಯುವನು. (35)

"ಪಂಚೇಂದ್ರಿಯಗಳು, ಕ್ರೋಧ, ಮಾನ, ಮಾಯೆ, ಅಂತೆಯೇ ಲೋಭ—ಆತ್ಮವನ್ನು ಜಯಿಸುವುದು ಕಷ್ಟ. ಆತ್ಮವನ್ನು ಜಯಿಸಿದರೆ ಸರ್ವವನ್ನೂ ಜಯಿಸಿದಂತೆ." (36)

---

1. ಗೃಹಗಳಲ್ಲಿ ಒಂದು ತರಹ ಶ್ರೇಷ್ಠವಾದ ಗೃಹ. 2. ಒಂದು ತೆರದ ಗೋಪುರ (Turret).

ಇಂದ್ರನು (ಮೇಲೆ 11ರಂತೆ) ಹೀಗೆಂದನು: (37)

"ವಿಪುಲವಾದ ಯಜ್ಞಗಳನ್ನು ಮಾಡು. ಶ್ರಮಣರಿಗೂ ಬ್ರಾಹ್ಮಣರಿಗೂ ಊಟ ಹಾಕು. ದಾನ ಕೊಡು, ಅನುಭವಿಸು, ಯಾಗಮಾಡು. ಹೀಗೆ ನೀನು ಕ್ಷತ್ರಿಯನಾಗುವೆ." (38)

ನಮಿಯು (ಮೇಲೆ 8ರಂತೆ) ಹೀಗೆಂದನು: (39)

"ಮಾಸಮಾಸವೂ ಸಾವಿರಸಾವಿರದಂತೆ ಗೋಗಳನ್ನು ದಾನಮಾಡಿದರೂ; ಅದಕ್ಕಿಂತ, ಏನೂ ದಾನಮಾಡದಿದ್ದರೂ ಸಂಯಮದಿಂದ ಇರುವುದು ಮೇಲು." (40)

ಇಂದ್ರನು (ಮೇಲೆ 11ರಂತೆ) ಹೀಗೆಂದನು: (41)

"ಘೋರವಾದ ಒಂದು ಆಶ್ರಮ[1]ವನ್ನು ಬಿಟ್ಟು, ಬೇರೊಂದು ಆಶ್ರಮವನ್ನು ಬಯಸುವೆ. ಇಲ್ಲಿಯೇ ಪೋಷಧದಲ್ಲಿ ರಮಿಸುವವನಾಗು, ಮನುಜಾಧಿಪ." (42)

ನಮಿಯು (ಮೇಲೆ 8ರಂತೆ) ಹೀಗೆಂದನು: (43)

"ಅಜ್ಞಾನಿಯಾದವನು ಮಾಸಮಾಸವೂ ದರ್ಭೆಯ ತುದಿಯಿಂದ ಊಟಮಾಡಿದರೂ, ಚೆನ್ನಾಗಿ ತಿಳಿಸಲ್ಪಟ್ಟ ಧರ್ಮವನ್ನು ಪಡೆದವರ ಹದಿನಾರರಲ್ಲೊಂದು ಪಾಲಿಗೂ ಅವನು ಸರಿಬಾರನು." (44)

ದೇವೇಂದ್ರನು (ಮೇಲೆ 11ರಂತೆ) ಹೀಗೆಂದನು: (45)

"ನಿನ್ನ ಚಿನ್ನ ಬೆಳ್ಳಿಗಳನ್ನು, ಮಣಿ ಮುತ್ತುಗಳನ್ನು, ಕಂಚನ್ನು, ವಸ್ತ್ರ ವಾಹನಗಳನ್ನು, ನಿನ್ನ ಭಂಡಾರವನ್ನು ವೃದ್ಧಿಗೊಳಿಸು. ಆಗ ನೀನು ಕ್ಷತ್ರಿಯನಾಗುವೆ." (46)

ನಮಿಯು (ಮೇಲೆ 8ರಂತೆ) ಹೀಗೆಂದನು: (47)

"ಕೈಲಾಸ ಸಮವಾದ ಚಿನ್ನ ಬೆಳ್ಳಿಗಳ ಪರ್ವತಗಳು ಅಸಂಖ್ಯವಾಗಿರಲಿ—ಲುಬ್ಧನಾದವನಿಗೆ ತೃಪ್ತಿಯಿಲ್ಲ. ಅವನ ಆಸೆಯು ಆಕಾಶದಂತೆ ಅನಂತವಾದುದು. (48)

"ಅಕ್ಕಿ, ಯವೆ, ಚಿನ್ನ, ಹಸುಗಳಿಂದ ಪ್ರತಿಪೂರ್ಣವಾದ ಪೃಥ್ವಿ ಕೂಡ ಒಬ್ಬನಿಗೆ ಸಾಲದೆಂದು ತಿಳಿದು ತಪಸ್ಸನ್ನು ಆಚರಿಸಬೇಕು." (49)

1. ಗೃಹಸ್ಥಾಶ್ರಮ. ಇಂದ್ರನು ಗೃಹಸ್ಥಾಶ್ರಮವನ್ನು ಏಕೆ ಘೋರವೆನ್ನುವನೆಂದು ತಿಳಿಯುವುದಿಲ್ಲ. ಮುಂದಿನ ಸಂನ್ಯಾಸಾಶ್ರಮವನ್ನು ಘೋರವೆನ್ನುವುದು ಸಹಜ.

ದೇವೇಂದ್ರನು (ಮೇಲೆ 11ರಂತೆ) ಹೀಗೆಂದನು: (50)

"ಆಶ್ಚರ್ಯ! ಪಾರ್ಥಿವ, ಇಲ್ಲದ ಕಾಮಗಳನ್ನು ಆಶಿಸಿ, ಅದ್ಭುತವಾದ ಭೋಗಗಳನ್ನು ತ್ಯಾಗಮಾಡುವೆ. ನಿನ್ನ ಸಂಕಲ್ಪವೇ ನಿನಗೆ ಹಾನಿಯಾಗುವುದು." (51)

ನಮಿಯು (ಮೇಲೆ 8ರಂತೆ) ಹೀಗೆಂದನು: (52)

"ಕಾಮಗಳು ಶಲ್ಯಗಳು, ಕಾಮಗಳು ವಿಷ, ಕಾಮಗಳು ವಿಷಸರ್ಪದಂತಹವು. ಕಾಮಗಳನ್ನು ಬಯಸುವವನು ಅವುಗಳನ್ನು ಪಡೆಯದೆ ದುರ್ಗತಿಗೆ ಹೋಗುವನು. (53)

"ಕ್ರೋಧದಿಂದ ಕೆಳಗೆ ಹೋಗುವನು. ಮಾನದಿಂದ ಅವನಿಗೆ ಅಧಮಗತಿ. ಮಾಯದಿಂದ ಅವನ ಸದ್ಗತಿಗೆ ಪ್ರತಿಘಾತ. ಲೋಭದಿಂದ ಅವನಿಗೆ ಎರಡು ತೆರನಾದ ಭಯ." (54)

ಶಕ್ರನು ಬ್ರಾಹ್ಮಣ ರೂಪವನ್ನು ಒಗೆದು, ಇಂದ್ರತ್ವವನ್ನು ತೋರಿಸಿ, ವಂದಿಸಿ, ಮಧುರವಾದ ಮಾತುಗಳಿಂದ ಸ್ತುತಿಸಿದನು: (55)

"ಅಹೋ, ನೀನು ಕ್ರೋಧವನ್ನು ಜಯಿಸಿರುವೆ! ಅಹೋ, ನೀನು ಮಾನವನ್ನು ಸೋಲಿಸಿರುವೆ! ಅಹೋ, ನೀನು ಮಾಯವನ್ನು ನಿರಾಕರಿಸಿರುವೆ! ಅಹೋ, ನೀನು ಲೋಭವನ್ನು ವಶಪಡಿಸಿರುವೆ. (56)

"ಅಹೋ, ನಿನ್ನ ಆರ್ಜವ ಸಾಧುವಾದುದು. ಅಹೋ, ನಿನ್ನ ಮಾರ್ದವ ಮೇಲಾದುದು. ಅಹೋ, ನಿನ್ನ ಕ್ಷಮೆ ಶ್ರೇಷ್ಠವಾದುದು. ಅಹೋ, ನಿನ್ನ ಮುಕ್ತಿ ಉತ್ತಮವಾದುದು. (57)

"ಭಗವನ್, ನೀನು ಇಲ್ಲಿ ಉತ್ತಮನು. ಮುಂದೆಯೂ ನೀನು ಉತ್ತಮನಾಗುವೆ. ಕೊಳೆಗಳಿಲ್ಲದೆ ನೀನು ಲೋಕೋತ್ತಮೋತ್ತಮ ಸ್ಥಾನವಾದ ಸಿದ್ಧಿಗೆ ಹೋಗುವೆ." (58)

ಹೀಗೆ ರಾಜರ್ಷಿಯನ್ನು ಸ್ತುತಿಸಿ, ಉತ್ತಮವಾದ ಶ್ರದ್ಧೆಯಿಂದ ಪ್ರದಕ್ಷಿಣೆ ಮಾಡಿ, ಶಕ್ರನು ಪುನಃ ಪುನಃ ವಂದಿಸಿದನು. (59)

ಮುನಿವರನ ಚಕ್ರ ಅಂಕುಶಗಳ ಲಕ್ಷಣವಿರುವ ಪಾದಗಳಿಗೆ ವಂದಿಸಿ, ಆಕಾಶದಲ್ಲಿ ಮೇಲೆದ್ದನು; ಅವನ (=ಶಕ್ರನ) ಕುಂಡಲ ಕಿರೀಟಗಳು ಲಲಿತವಾಗಿ ಚಪಲಿಸುತ್ತಿದ್ದುವು. (60)

ಆ ವಿದೇಹರಾಜನಾದ ನಮಿಯು ಆತ್ಮವನ್ನು ನಮಿಸಿ, ಸಾಕ್ಷಾತ್ ಶಕ್ರನಿಂದ ಚೋದಿಸಲ್ಪಟ್ಟು, ಮನೆಯನ್ನು ತ್ಯಜಿಸಿ, ಶ್ರಾಮಣ್ಯವನ್ನು ಕೈಕೊಂಡನು. (61)

ಸಂಬುದ್ಧರು, ಪಂಡಿತರು, ಪ್ರವಿಚಕ್ಷಣರು ಹೀಗೆ ಮಾಡುವರು; ರಾಜರ್ಷಿಯಾದ ನಮಿಯಂತೆ ಭೋಗಗಳಿಂದ ವಿಮುಖರಾಗುವರು. (62)

ಎಂದು ಹೇಳುತ್ತೇನೆ.

## ೫. ಚಿತ್ತ ಮತ್ತು ಸಂಭೂತ

('ಚಿತ್ತ ಸಂಭೂತೀಯ' ಎಂಬ ಹದಿಮೂರನೆಯ ಅಧ್ಯಯನ.)

ತನ್ನ ಜಾತಿಗಾಗಿ ಬಹಳ ಹೀನೈಸಲ್ಪಟ್ಟು, ಸಂಭೂತನು ಹಸ್ತಿನಪುರ ದಲ್ಲಿ ಒಂದು ನಿದಾನ[1]ವನ್ನು ಎತ್ತಿಕೊಂಡು, ಪದ್ಮಗುಲ್ಮದಿಂದ ಬಂದು ಕಾಂಪೀಲ್ಯದ ಚುಲನಿಯಲ್ಲಿ ಬ್ರಹ್ಮದತ್ತನಾಗಿ ಹುಟ್ಟಿದನು. ಆದರೆ ಚಿತ್ತನು ಪುರಿಮತಾಲದ ವಿಶಾಲವಾದ ಶ್ರೇಷ್ಠಿಕುಲದಲ್ಲಿ ಜನಿಸಿ, ಧರ್ಮವನ್ನು ಕೇಳಿ, ಪರಿವ್ರಜಿಸಿದನು. (1—2)

ಚಿತ್ತ ಸಂಭೂತರು ಇಬ್ಬರೂ ಕಾಂಪೀಲ್ಯ ನಗರದಲ್ಲಿ ಸಂಧಿಸಿದರು. ಒಬ್ಬರೊಡನೊಬ್ಬರು ತಮ್ಮ ಸುಖದುಃಖಗಳ ಫಲವಿಪಾಕಗಳನ್ನು ಹೇಳಿ ಕೊಂಡರು. (3)

ಮಹಾಸಂಪದನೂ ಮಹಾಯಶನೂ ಆದ ಚಕ್ರವರ್ತಿ ಬ್ರಹ್ಮದತ್ತನು ತನ್ನ ಭ್ರಾತೃ[2]ವನ್ನು ಬಹುಮಾನಿಸಿ ಈ ಮಾತು ಹೇಳಿದನು: (4)

"ನಾವಿಬ್ಬರೂ ಭ್ರಾತೃಗಳಾಗಿದ್ದೆವು. ಒಬ್ಬರಿಗೊಬ್ಬರು ವಶವರ್ತಿ ಗಳಾಗಿ, ಒಬ್ಬರಲ್ಲೊಬ್ಬರು ಅನುರಕ್ತರಾಗಿ, ಒಬ್ಬರಿಗೊಬ್ಬರು ಹಿತ ಬಯಸು ತ್ತಿದ್ದೆವು. (5)

"ದಶಾರ್ಣದಲ್ಲಿ ದಾಸರಾಗಿ, ಕಾಲಿಂಜರ ಪರ್ವತದಲ್ಲಿ ಮೃಗಗಳಾಗಿ, ಮೃತಗಂಗಾತೀರದಲ್ಲಿ ಹಂಸಗಳಾಗಿ, ಕಾಶೀಭೂಮಿಯಲ್ಲಿ ಶ್ವಪಾಕರಾಗಿ ಇದ್ದೆವು. (6)

"ದೇವಲೋಕದಲ್ಲಿ ದೇವರಾಗಿ, ಮಹಾ ಸಂಪದರಾಗಿದ್ದೆವು. ಈ ಅನ್ಯೋನ್ಯ ಬೇರೆಯಾಗಿರುವ ಇದು ನಮ್ಮ ಆರನೆಯ ಜನ್ಮ." (7)

"ಕರ್ಮಗಳು ನಿದಾನ[1]ಗಳಿಂದ ಹುಟ್ಟುವುವು. ನೀನು ಅವುಗಳನ್ನು ಚೆನ್ನಾಗಿ ಚಿಂತಿಸಿರುವೆ, ರಾಜ. ಅದರ ಫಲವಿಪಾಕದಿಂದ ನಮಗೆ ವಿಯೋಗ ಒದಗಿದೆ." (8)

---

1. ಸಂಕಲ್ಪ. 2. ಹಿಂದಿನ ಜನ್ಮಗಳಲ್ಲಿ ಭ್ರಾತೃ.

“ಸತ್ಯ ಶೌಚಗಳಿಂದ ಕೂಡಿದ ಕರ್ಮಗಳನ್ನು ನಾನು ಹಿಂದೆ ಮಾಡಿದೆ. ಅದನ್ನು ಈಗ ಅನುಭವಿಸುತ್ತಿದ್ದೇನೆ. ನಿನ್ನದೂ ಹೀಗೇಯೇನು, ಚಿತ್ತ?” (9)

“ಮಾಡಿದ ಎಲ್ಲ ಸತ್ಕಾರಗಳೂ ಜನರಿಗೆ ಫಲಕೊಡುತ್ತವೆ; ಮಾಡಿದ ಕರ್ಮದಿಂದ ಬಿಡುಗಡೆಯಿಲ್ಲ. ಅರ್ಥಗಳಿಂದಲೂ ಉತ್ತಮವಾದ ಕಾಮುಗಳಿಂದಲೂ ನನ್ನ ಆತ್ಮವು ಪುಣ್ಯಫಲಗಳನ್ನು ಪಡೆದಿದೆ. (10)

“ಬಲ್ಲೆಯ, ಸಂಭೂತ? ನಿನ್ನ ಪುಣ್ಯದ ಫಲವನ್ನು ಮಹಾ ಐಶ್ವರ್ಯದಲ್ಲಿ, ಮಹಾ ಸಂಪತ್ತಿನಲ್ಲಿ, ನೀನು ಪಡೆದಿರುವೆ. ಚಿತ್ತನಿಗೂ ಹಾಗೆಯೇ ಎಂದು ತಿಳಿ, ರಾಜ. ಅವನಿಗೆ ಕೂಡ ಋದ್ಧಿಯೂ ದ್ಯುತಿಯೂ ಉಂಟಾಗಿವೆ. (11)

“ಸ್ವಲ್ಪ ಮಾತಿನಲ್ಲಿ ಬಹಳ ಅರ್ಥವನ್ನುಳ್ಳ ಗಾಹೆಯೊಂದನ್ನು ಜನರ ಸಂಘದ ನಡುವೆ ಹಾಡಿರುವರು. ಶೀಲ ಗುಣಗಳಿಂದ ಕೂಡಿದ ಭಿಕ್ಷುಗಳು ಅದನ್ನು ಕೇಳಿ, ‘ನಾನು ಶ್ರಮಣನಾದೆ’ನೆಂದು ಯತ್ನಿಸುವರು.” (12)

“ಉಚ್ಚ, ಉದಯ, ಮಧು, ಕರ್ಕ ಮತ್ತು ಬ್ರಹ್ಮ ಎಂಬ ನನ್ನ ರಮ್ಯವಾದ ಆವಾಸಗಳು ಪ್ರಖ್ಯಾತವಾದುವು. ಪಂಚಾಲಗುಣೋಪಪೇತವಾಗಿ ರಾಶಿಧನವಿರುವ ಈ ಮನೆಯನ್ನು ನಿನ್ನದೆಂದು ಭಾವಿಸು, ಚಿತ್ತ. (13)

“ಕುಣಿದು, ಹಾಡಿ, ವಾದ್ಯ ಬಾರಿಸುವ ನಾರೀಜನರ ಪರಿವಾರವನ್ನಿಟ್ಟುಕೊ. ಈ ಭೋಗಗಳನ್ನೆಲ್ಲ ಅನುಭವಿಸು, ಭಿಕ್ಷು. ಪ್ರವ್ರಜ್ಯವು ಬಹು ದುಃಖವೆಂದು ನನಗೆನಿಸುತ್ತದೆ.” (14)

ಕಾಮುಗುಣಗಳಲ್ಲಿ ಸಿಕ್ಕಿದ ಆ ದೊರೆಯ ಮೇಲಿನ ಪೂರ್ವಸ್ನೇಹದ ಅನುರಾಗದಿಂದ, ಅವನ ಹಿತವನ್ನು ಕುರಿತು, ಧರ್ಮದಲ್ಲಿ ಆಶ್ರಿತನಾದ ಚಿತ್ತನು ಈ ಮಾತು ಹೇಳಿದನು: (15)

“ಎಲ್ಲ ಗೀತವೂ ವಿಲಾಪವು. ಸರ್ವ ನೃತ್ಯವೂ ವಿಡಂಬವು. ಸರ್ವ ಆಭರಣಗಳೂ ಭಾರವು. ಸರ್ವ ಕಾಮುಗಳೂ ದುಃಖವನ್ನು ತರುವವು. (16)

“ರಾಜ! ದುಃಖವನ್ನು ತರುವ ಕಾಮುಗುಣಗಳು ಬಾಲರನ್ನು ರಮಿಸುವುವು; ಕಾಮುಗಳಲ್ಲಿ ವಿರಕ್ತರಾದ ತಪೋಧನರನ್ನೂ ಶೀಲ ಗುಣಗಳಲ್ಲಿ ರತರಾದ ಭಿಕ್ಷುಗಳನ್ನೂ ಅವು ಸುಖಪಡಿಸವು. (17)

"ನರೇಂದ್ರ, ನರಜಾತಿಗಳಲ್ಲಿ ಅಧಮವಾದ ಶ್ವಪಾಕ ಜಾತಿಯಲ್ಲಿ ಎರಡು ಬಾರಿ ಹೋಗಿದ್ದೆವು. ಅಲ್ಲಿ ಸರ್ವಜನರೂ ನಮ್ಮನ್ನು ದ್ವೇಷಿಸುತ್ತಿದ್ದರು. ಶ್ವಪಾಕನಿವೇಶದಲ್ಲಿ ವಾಸಮಾಡಿದೆವು. (18)

"ಆ ಪಾಪಿಕವಾದ ಜನ್ಮದಲ್ಲಿ ಸರ್ವಲೋಕದಿಂದ ಜುಗುಪ್ಸಿತರಾಗಿ ಶ್ವಪಾಕನಿವೇಶನದಲ್ಲಿ ವಾಸಿಸಿದೆವು. ಈ ಕರ್ಮವನ್ನು ಹಿಂದೆ ಮಾಡಿದೆವು. (19)

"ಈಗ, ನೀನು ಪುಣ್ಯಫಲಗಳಿಂದ ಕೂಡಿ ಮಹಾಶಕ್ತನಾದ ಮಹಾಸಂಪದನಾದ ರಾಜನಾಗಿರುವೆ. ಅಶಾಶ್ವತವಾದ ಭೋಗಗಳನ್ನು ಬಿಟ್ಟು, ಆದಾನ[1]ಕ್ಕಾಗಿ ಅಭಿನಿಷ್ಕ್ರಮಿಸು. (20)

"ರಾಜ, ಈ ಅಶಾಶ್ವತವಾದ ಜೀವಿತದಲ್ಲಿ ಪುಣ್ಯಗಳನ್ನು ಮಾಡದೆ ಧರ್ಮದಲ್ಲಿ ನಡೆಯದವನು, ಮೃತ್ಯುವಿನ ಎದುರಿಗೆ ಒಯ್ಯಲ್ಪಟ್ಟಾಗ, ಪರಲೋಕದಲ್ಲಿ, ಶೋಕಿಸುವನು. (21)

"ಸಿಂಹವು ಮೃಗವನ್ನು ಹಿಡಿಯುವಂತೆ, ಮೃತ್ಯುವು ಕಡೆಗಾಲದಲ್ಲಿ ಮನುಷ್ಯನನ್ನು ಒಯ್ಯುವುದು. ಆ ಕಾಲದಲ್ಲಿ ತಾಯಿತಂದೆಯಾಗಲಿ ಸೋದರರಾಗಲಿ ಒಂದು ಚೂರೂ ಕಾಪಾಡರು. (22)

"ಜ್ಞಾತಿಗಳಾಗಲಿ, ಮಿತ್ರವರ್ಗವಾಗಲಿ, ಮಕ್ಕಳಾಗಲಿ, ಬಾಂಧವರಾಗಲಿ, ಅವನ ದುಃಖವನ್ನು ಹಂಚಿಕೊಳ್ಳರು. ತಾನೊಬ್ಬನೇ ತನ್ನ ದುಃಖವನ್ನು ಮೇಲಿಂದ ಮೇಲೆ ಅನುಭವಿಸುವನು. ಕರ್ಮವು ಕರ್ತಾರನನ್ನೇ ಅನುಸರಿಸುವುದು. (23)

"ದ್ವಿಪಾದಿಗಳನ್ನೂ ಚತುಷ್ಪಾದಿಗಳನ್ನೂ ಕ್ಷೇತ್ರ ಗೃಹ ಧನ ಧಾನ್ಯಗಳೆಲ್ಲವನ್ನೂ ಬಿಟ್ಟು, ಅವಶನಾಗಿ[2] ಸ್ವಕರ್ಮ ದ್ವಿತೀಯನಾಗಿ ಮತ್ತೊಂದು ಭವಕ್ಕೆ—ಅದು ಸುಂದರವಾಗಲಿ ಪಾಪಕವಾಗಲಿ—ಹೋಗುವನು. (24)

"ಅವನ ಒಂಟಿಯಾದ ತುಚ್ಛ ಶರೀರವನ್ನು ಚಿತೆಯ ಮೇಲೆ ಬೆಂಕಿಯಿಂದ ಸುಟ್ಟು, ಅವನ ಹೆಂಡತಿ ಮಕ್ಕಳೂ ಜ್ಞಾತಿಗಳೂ ಬೇರೊಬ್ಬ ದಾತಾರನ ಬಳಿ ಹೋಗುವರು. (25)

"ಜೀವಿತವು ಅಪ್ರಮತ್ತವಾಗಿ ಎಳೆದುಕೊಂಡು ಹೋಗುವುದು; ಮುಪ್ಪು ಜನರ ಬಣ್ಣವನ್ನು ಅಪಹರಿಸುವುದು, ರಾಜ. ನನ್ನ ಮಾತು

---

1. ಚರಿತ್ರಧರ್ಮ, ಅತ್ಯುತ್ತಮವಾದ ಧರ್ಮ. 2. ತನಗೆ ತಾನು ವಶನಲ್ಲದೆ ಕರ್ಮಕ್ಕೆ ವಶನಾಗಿ.

ಕೇಳು, ಪಂಚಾಲರಾಜ; ಮಹಾಲಯವಾದ ಕರ್ಮಗಳನ್ನು ಮಾಡ ಬೇಡ." (26)

"ಹೇ ಸಾಧು! ನೀನು ನಿನ್ನ ಮಾತಿನಲ್ಲಿ ತೋರಿಸಿರುವಂತೆಯೇ ನಾನೂ ಬಲ್ಲೆ. ಈ ಭೋಗಗಳು ಜೊತೆಯನ್ನು ಉಂಟುಮಾಡುವವು. ನಮ್ಮಂತಹವ ರಿಂದ ಜಯಿಸಲು ಕಷ್ಟ, ಆರ್ಯ. (27)

"ಚಿತ್ರ, ಹಸ್ತಿನಪುರದಲ್ಲಿ ನರಪತಿಯ ಮಹಾಸಂಪತ್ತನ್ನು ಕಂಡು, ಕಾಮಭೋಗಗಳ ಅತ್ಯಾಶೆಯಿಂದ ಅಶುಭವಾದ ನಿದಾನ[1]ವನ್ನು ಕೈ ಕೊಂಡೆನು. (28)

"ನಾನು ಪ್ರತಿಕ್ರಮಿಸದಿದ್ದುದರಿಂದ ಈ ರೀತಿಯಾದ ಈ ಫಲ. ಧರ್ಮವಾವುದೆಂದು ತಿಳಿದಿದ್ದರು ಕೂಡ, ಕಾಮಭೋಗಗಳಲ್ಲಿ ಮುಚ್ಚಿ ಹೋಗಿದ್ದೇನೆ. (29)

"ಕೆಸರು ನೀರಿನಲ್ಲಿ ಹೂತ ಆನೆಯು ಸ್ಥಲವನ್ನು ಕಂಡು ಕೂಡ ತೀರ ವನ್ನು ಮುಟ್ಟಲಾರದಂತೆ, ಕಾಮಗುಣಗಳನ್ನು ಬಯಸುವ ನಾವು ಭಿಕ್ಷುಗಳ ಮಾರ್ಗದಲ್ಲಿ ನಡೆಯೆವು." (30)

"ಕಾಲ ಕಳೆಯುತ್ತದೆ, ರಾತ್ರಿಗಳು ಓಡುತ್ತವೆ. ಪುರುಷರ ಭೋಗ ಗಳು ನಿತ್ಯವಾದುವಲ್ಲ. ಭೋಗಗಳು ಪುರುಷನನ್ನು ಸಾರಿ, ಹಣ್ಣು ಕಡಿಮೆ ಯಾದ ಮರವನ್ನು ಹಕ್ಕಿಗಳು ಹೇಗೋ ಹಾಗೆ, ಬಿಟ್ಟು ಹೋಗುವುವು. (31)

"ಭೋಗಗಳನ್ನು ಬಿಡುವುದು ನಿನಗೆ ಶಕ್ಯವಿಲ್ಲದಿದ್ದರೆ, ಆರ್ಯವಾದ ಕರ್ಮಗಳನ್ನು ಮಾಡು, ರಾಜ. ಧರ್ಮದಲ್ಲಿ ನಿಂತು, ಸರ್ವ ಪ್ರಜೆ ಗಳಲ್ಲಿ ಅನುಕಂಪವನ್ನು ಇಡು; ಅದರಿಂದ, ಇಲ್ಲಿಂದ ವಿಕ್ರಮಿಸಿ ದೇವ ನಾಗುವೆ. (32)

"ನಿನಗೆ ಭೋಗಗಳನ್ನು ಬಿಡಲು ಬುದ್ಧಿಯಿಲ್ಲದಿದ್ದರೆ, ಆರಂಭ ಪರಿ ಗ್ರಹಗಳಲ್ಲಿ ಆಸೆಯಿದ್ದರೆ, ಇದಿಷ್ಟೂ ವ್ಯರ್ಥ, ವಿಪ್ರಲಾಪ. ಹೋಗಿ ಬರು ವೆನು, ರಾಜ." (33)

---

1. ಸಂಭೂತನು, ತನ್ನ ಹಿಂದಿನ ಜನ್ಮದಲ್ಲಿ ಮುನಿಯಾಗಿದ್ದಾಗ, ಸನತ್ಕುಮಾರನೆಂಬ ದೊರೆಯ ಪತ್ನಿ ಸುನಂದಾದೇವಿಯು ನಮಸ್ಕರಿಸಲು, ಆಕೆಯ ತಲೆಗೂದಲು ಕಾಲಿಗೆ ತಾಕಿದಾಗ, ತನ್ನ ತಪಸ್ಸಿನ ಫಲವಾಗಿ ತಾನು ಮುಂದಿನ ಜನ್ಮದಲ್ಲಿ ಚಕ್ರವರ್ತಿಯಾಗಬೇಕೆಂದು ತೀವ್ರವಾಗಿ ಬಯಸಿದನು.

ಪಂಚಾಲರಾಜನಾದ ಬ್ರಹ್ಮದತ್ತನು ಆ ಸಾಧುವಿನ ಮಾತನ್ನು ನಡೆಸದೆ, ಅನುತ್ತರವಾದ ಕಾಮಭೋಗಗಳನ್ನು ಸವಿದು, ಅನುತ್ತರವಾದ ನರಕವನ್ನು ಹೊಕ್ಕನು. (34)

ಆದರೆ ಉದಗ್ರವಾದ ಚಾರಿತ್ರ ತಪಸ್ಸುಗಳಿಂದ ಮಹರ್ಷಿಯಾದ ಚಿತ್ರನು ಕಾಮಗಳಲ್ಲಿ ಕಾಮವನ್ನು ಬಿಟ್ಟು, ಅನುತ್ತರವಾದ ಸಂಯಮವನ್ನು ಪಾಲಿಸಿ, ಅನುತ್ತರವಾದ ಸಿದ್ಧಿಗತಿಗೆ ಹೋದನು. (35)

ಎಂದು ಹೇಳುತ್ತೇನೆ.

## ೬. ಅನಾಥರ ನಾಥ

('ಮಹಾನಿರ್ಗ್ರಂಥೀಯ' ಎಂಬ ಇಪ್ಪತ್ತನೆಯ ಅಧ್ಯಯನ.)

ಸಿದ್ಧರಿಗೂ ಸಂಯಮಿಗಳಿಗೂ ಭಾವಪೂರ್ವಕವಾಗಿ ನಮಸ್ಕರಿಸಿ, ಅರ್ಥ ಧರ್ಮ ಗತಿಗಳನ್ನು[1] ಕುರಿತ ನನ್ನ ತತ್ಥ್ಯವಾದ ಅನುಶಾಸನವನ್ನು ಕೇಳಿರಿ. (1)

ರಾಶಿರತ್ನಗಳಿರುವ ಮಗಧಾಧಿಪನಾದ ರಾಜಾ ಶ್ರೇಣಿಕನು ಮಂಡಿ ಕುಕ್ಷಿ ಚೈತ್ಯ[2]ಕ್ಕೆ ವಿಹಾರಯಾತ್ರೆ ಹೊರಟನು. (2)

ನಾನಾ ಮರ ಬಳ್ಳಿಗಳಿಂದ ತುಂಬಿ, ನಾನಾ ಪಕ್ಷಿಗಳು ವಾಸಮಾಡಿ, ನಾನಾ ಹೂವುಗಳು ನೆರೆದು, ಆ ಉದ್ಯಾನವು ನಂದನದ ಹಾಗಿತ್ತು. (3)

ಅಲ್ಲಿ, ಸಂಯಮಿಯಾಗಿ ಸುಸಮಾಹಿತನಾದ ಸಾಧುವೊಬ್ಬನು, ಸುಕುಮಾರನಾಗಿ ಸುಖಕ್ಕೆ ಒಗ್ಗಿದವನು, ಮರದ ಮೂಲದಲ್ಲಿ ಕುಳಿತಿದ್ದುದನ್ನು ಅವನು ಕಂಡನು. (4)

ಆ ಸಂಯಮಿಯ ರೂಪವನ್ನು ರಾಜನು ಕಂಡನು. ಆ ರೂಪದಿಂದ ಆದ ವಿಸ್ಮಯವು ಅತ್ಯಂತ ಪರಮವಾಗಿತ್ತು, ಅತುಲವಾಗಿತ್ತು. (5)

"ಅಹೋ, ಬಣ್ಣ! ಅಹೋ, ರೂಪ! ಅಹೋ, ಆರ್ಯನ ಸೌಮ್ಯತೆ! ಅಹೋ, ಕ್ಷಾಂತಿ! ಅಹೋ, ಮುಕ್ತಿ! ಅಹೋ, ಭೋಗದ ಅಸಂಗತೆ!" (6) (ಎಂದು)

ಅವನ ಕಾಲುಗಳಿಗೆ ವಂದಿಸಿ, ಪ್ರದಕ್ಷಿಣೆ ಮಾಡಿ, ಬಹುದೂರವೂ ಬಹುಹತ್ತಿರವೂ ಅಲ್ಲದ ಬಳಿ ಕುಳಿತು, ಕೈಮುಗಿದು ಕೇಳಿದನು: (7)

"ಆರ್ಯ, ತರುಣನಾಗಿರುವೆ, ಪರಿವ್ರಜಿಸಿರುವೆ. ಭೋಗ ಕಾಲದಲ್ಲಿ ಸಂಯಮಿಯಾಗಿ ಶ್ರಾಮಣ್ಯದಲ್ಲಿ ನಿಂತಿರುವೆ. ಇದರ ಅರ್ಥವನ್ನು ತಿಳಿಸು." (8)

"ನಾನು ಅನಾಥ, ಮಹಾರಾಜ; ನನಗೆ ನಾಥರಿಲ್ಲ. ಅನುಕಂಪ ತೋರುವವರಾಗಲಿ, ಸಹೃದಯರಾಗಲಿ, ನನಗೆ ಯಾರೂ ಇಲ್ಲ." (9)

---

1. ಅರ್ಥ — ಶ್ರೇಯಸ್ಸು, ಮೇಲ್ಮೆ. ಧರ್ಮ — ಶ್ರೇಯಸ್ಸಿಗಾಗಿ ನಡೆಸಬೇಕಾದ ವಿಧಿಗಳು. ಗತಿ — ಮೋಕ್ಷ. 2. ಚೈತ್ಯವೆಂದರೆ, ಇಲ್ಲಿ, ವನ.

ಆಗ ಮಗಧಾಧಿಪನಾದ ರಾಜಾ ಶ್ರೇಣಿಕನು "ನಿನ್ನಂತಹ ಋದ್ಧಿಮಂತನಿಗೆ ನಾಥರಿಲ್ಲದಿರುವುದು ಹೇಗೆ?" ಎಂದು ನಕ್ಕನು. (10)

"ನಾನು ಭದಂತರಿಗೆ ನಾಥ. ಹೇ ಸಂಯತ, ಮಿತ್ರಜ್ಞಾತಿಗಳ ಪರಿವಾರದೊಡನೆ ಭೋಗಗಳನ್ನು ಭುಂಜಿಸು. ಮನುಷ್ಯ ಜನ್ಮವು ಸುಲಭವಾಗಿ ಸಿಕ್ಕುವುದಿಲ್ಲ." (11)

"ಮಗಧಾಧಿಪನಾದ ಶ್ರೇಣಿಕ, ನೀನೇ ಅನಾಥನಾಗಿರುವೆ. ನೀನೇ ಅನಾಥನಾಗಿರುವಾಗ, (ಇತರರಿಗೆ) ಹೇಗೆ ನಾಥನಾದೀಯೆ!" (12)

ಹಿಂದೆ ಎಂದೂ ಕೇಳದ ಈ ಮಾತನ್ನು ಸಾಧುವು ಹೇಳಲು ಆ ನರೇಂದ್ರನು ಸಂಭ್ರಾಂತನಾಗಿ, ವಿಸ್ಮಿತನಾಗಿ, ವಿಸ್ಮಯಾನ್ವಿತನಾಗಿ (ಹೀಗೆಂದನು): (13)

"ನನಗೆ ಕುದುರೆ, ಆನೆಗಳಿವೆ; ಜನರಿದ್ದಾರೆ. ನನಗೆ ಪುರ ಅಂತಃಪುರಗಳಿವೆ. ಮಾನುಷವಾದ ಭೋಗಗಳನ್ನು ಸವಿಯುತ್ತೇನೆ. ನನಗೆ ಆಜ್ಞೆ ಐಶ್ವರ್ಯಗಳು ಇವೆ. (14)

"ಸರ್ವ ಕಾಮಗಳನ್ನೂ ಸಮರ್ಪಿಸುವ ಈ ರೀತಿಯ ಉಚ್ಚ ಸಂಪದವಿರುವಾಗ ಅನಾಥನು ಹೇಗಾದೇನು? ಇಲ್ಲ, ಭದಂತ. ಸುಳ್ಳು ಹೇಳುವೆ." (15)

"ಪಾರ್ಥಿವ! ಅನಾಥ ಎಂಬುದರ ಅರ್ಥವನ್ನಾಗಲಿ ಸ್ವರೂಪವನ್ನಾಗಲಿ ನೀನು ತಿಳಿಯೆ. ಅನಾಥರಾಗುವುದನ್ನೂ ಸನಾಥರಾಗುವುದನ್ನೂ ನೀನರಿಯೆ, ನರಾಧಿಪ. (16)

"ಅನಾಥನು ಹೇಗಾಗುವನೆಂಬುದನ್ನೂ ನಾನು ಹೇಗೆ ಇದನ್ನು ಹೇಳಿದೆನೆಂಬುದನ್ನೂ ಅಲುಗದ ಚಿತ್ತದಿಂದ ಕೇಳು, ಮಹಾರಾಜ. (17)

"ಕೌಶಾಂಬಿಯೆಂಬ ನಗರಿ; ಪುರಗಳಲ್ಲಿ ಪುರಭೇದನ[1]ನಂತಹದು. ಅಲ್ಲಿ ಹಣವನ್ನು ಕೂಡಿಹಾಕಿ ರಾಶಿಮಾಡಿದ ನನ್ನ ತಂದೆಯಿದ್ದನು. (18)

"ಚಿಕ್ಕಂದಿನಲ್ಲಿ, ಮಹಾರಾಜ, ನನಗೆ ಅತುಲವಾದ ಕಣ್ಣುನೋವೂ ಅಂಗಗಳಲ್ಲೆಲ್ಲ ಅತುಲವಾದ ಜ್ವರವೂ ಬಂತು. (19)

---

1. ದೇವೇಂದ್ರನು ದೇವತೆಗಳಲ್ಲಿ ಹೇಗೋ ಹಾಗೆ.

"ಕ್ರುದ್ಧನಾದ ಶತ್ರುವು ಪರಮ ತೀಕ್ಷ್ಣವಾದ ಶಸ್ತ್ರವನ್ನು ಶರೀರದ ಒಳಕ್ಕೆ ಚುಚ್ಚಿದಂತೆ ನನ್ನ ಕಣ್ಣಿನೋವು ಇತ್ತು. (20)

"ಸಿಡಿಲಿಗೆ ಸಮವಾಗಿ ಘೋರವೂ ಪರಮ ದಾರುಣವೂ ಆದ ವೇದನೆಯು ನನ್ನ ಬೆನ್ನು, ಎದೆ, ತಲೆಗಳನ್ನು ಪೀಡಿಸುತ್ತಿತ್ತು. (21)

"ವಿದ್ಯೆ ಮಂತ್ರಗಳಿಂದ ಚಿಕಿತ್ಸೆಮಾಡುವ ಆಚಾರ್ಯರೂ ಅದ್ವಿತೀಯರಾದ ಶಾಸ್ತ್ರಕುಶಲರೂ ಮಂತ್ರ ಮೂಲಿಕೆಗಳಲ್ಲಿ ವಿಶಾರದರಾದವರೂ ನನ್ನ ಬಳಿ ಬಂದರು. (22)

"ಅವರು ತಮಗೆ ಕಲಿಸಿದ ನಾಲ್ಕು ತೆರದ ವಿದ್ಯೆಗಳಿಂದ ನನಗೆ ಚಿಕಿತ್ಸೆ ಮಾಡಿದರು. ಅವರು ನನ್ನನ್ನು ದುಃಖದಿಂದ ಬಿಡಿಸಲಾರದಾದರು. ನನ್ನ ಅನಾಥತೆ ಹೀಗೆ. (23)

"ನನಗಾಗಿ ನನ್ನ ತಂದೆ ತನ್ನ ಸರ್ವಸಾರವನ್ನೂ ಕೊಡುವನು. ಆದರೆ ನನ್ನನ್ನು ದುಃಖದಿಂದ ಬಿಡಿಸಲಾರದಾದನು. ನನ್ನ ಅನಾಥತೆ ಹೀಗೆ. (24)

"ಪುತ್ರಶೋಕದಿಂದ ದುಃಖಾರ್ತೆಯಾದ ನನ್ನ ತಾಯಿಯೂ ನನ್ನನ್ನು ದುಃಖದಿಂದ ಬಿಡಿಸಲಾರದಾದಳು, ಮಹಾರಾಜ. ನನ್ನ ಅನಾಥತೆ ಹೀಗೆ. (25)

"ಮಹಾರಾಜ, ನನ್ನ ಸ್ವಂತ ಸೋದರರು–ಹಿರಿಯರೂ ಕಿರಿಯರೂ– ನನ್ನನ್ನು ದುಃಖದಿಂದ ಬಿಡಿಸಲಾರದಾದರು. ನನ್ನ ಅನಾಥತೆ ಹೀಗೆ. (26)

"ಮಹಾರಾಜ, ನನ್ನ ಸ್ವಂತ ಸೋದರಿಯರು—ಹಿರಿಯರೂ ಕಿರಿಯರೂ—ನನ್ನನ್ನು ದುಃಖದಿಂದ ಬಿಡಿಸಲಾರದಾದರು. ನನ್ನ ಅನಾಥತೆ ಹೀಗೆ. (27)

"ಅನುರಕ್ತೆಯಾಗಿ ಅನುವ್ರತೆಯಾದ ನನ್ನ ಹೆಂಡತಿಯು, ಮಹಾರಾಜ, ಕಣ್ಣೀರು ತುಂಬಿದ ಕಣ್ಣುಗಳಿಂದ ನನ್ನಎದೆಯನ್ನು ನೆನೆಸಿದಳು. (28)

"ಆ ಬಾಲೆಯು ನನಗೆ ತಿಳಿದೂ ತಿಳಿಯದೆಯೂ ಊಟಮಾಡಲಿಲ್ಲ, ಕುಡಿಯಲಿಲ್ಲ, ಮೀಯಲಿಲ್ಲ, ಗಂಧ ಮಾಲ್ಯ ವಿಲೇಪನಗಳನ್ನು ಬಳಸಲಿಲ್ಲ. (29)

"ಅವಳು ಒಂದು ಕ್ಷಣವಾದರೂ ನನ್ನ ಪಕ್ಕದಿಂದ ಕದಲಲಿಲ್ಲ, ಮಹಾರಾಜ. ಆದರೂ ನನ್ನನ್ನು ದುಃಖದಿಂದ ಬಿಡಿಸಲಿಲ್ಲ. ಹೀಗೆ ನನ್ನ ಅನಾಥತೆ. (30)

"ಆಗ 'ಅನಂತಕವಾದ ಸಂಸಾರದಲ್ಲಿ ವೇದನೆಗಳನ್ನು ಪುನಃ ಪುನಃ ಅನುಭವಿಸುವುದನ್ನು ಸಹಿಸುವುದು ಕಷ್ಟ' ಎಂದು ನಾನೇ ಹೇಳಿಕೊಂಡೆ. (31)

" 'ಈ ವಿಪುಲವಾದ ವೇದನೆಯಿಂದ ಒಮ್ಮೆ ನನಗೆ ಬಿಡುಗಡೆಯಾದರೆ, ಶಾಂತನಾಗಿ ದಾಂತನಾಗಿ ಆರಂಭಗಳನ್ನು ಬಿಟ್ಟು ಮನೆಯಿಲ್ಲದವನಾಗಿ ಪರಿವ್ರಜಿಸುವೆನು.' (32)

"ಹೀಗೆ ಚಿಂತಿಸುತ್ತ ನಿದ್ರೆಬಂತು, ನರಾಧಿಪ. ಆ ರಾತ್ರಿ ಉರುಳಿದ ನಂತರ ನನ್ನ ವೇದನೆ ಕ್ಷಯವಾಯಿತು. (33)

"ಮರುದಿನ ಬೆಳಗ್ಗೆ ಬಾಂಧವರನ್ನು ಬೀಳ್ಕೊಂಡು, ಶಾಂತನಾಗಿ ದಾಂತನಾಗಿ ಆರಂಭಗಳನ್ನು ಬಿಟ್ಟು ಮನೆಯಿಲ್ಲದವನಾಗಿ ಪರಿವ್ರಜಿಸಿದೆನು. (34)

"ಹೀಗೆ ನಾನು ನನಗೂ ಇತರರಿಗೂ ತ್ರಸ ಸ್ಥಾವರಗಳಾದ ಸರ್ವ ಭೂತಗಳಿಗೂ ನಾಥನಾದೆನು. (35)

"ಆತ್ಮವು ವೈತರಣೀ[1] ನದಿ; ಆತ್ಮವು ಶಾಲ್ಮಲೀ[2] ವೃಕ್ಷ; ಆತ್ಮವು ಕಾಮಧೇನು; ನನ್ನ ಆತ್ಮವೇ ನಂದನವನ. (36)

"ದುಃಖ ಸುಖಗಳನ್ನು ಮಾಡುವುದೂ ಮಾಡಿದುದನ್ನು ಕಳೆಯುವುದೂ ನನ್ನ ಆತ್ಮ. ದುಃಖದಲ್ಲಿ ನಡೆದಂತೆ ಅಥವಾ ಸುಖದಲ್ಲಿ ನಡೆದಂತೆ ಆತ್ಮವೇ ಶತ್ರು ಅಥವಾ ಮಿತ್ರ." (37)

* * * * [3](38–53)

ಶ್ರೇಣಿಕರಾಜನು ಸಂತುಷ್ಟನಾಗಿ ಕೈಮುಗಿದು ಹೀಗೆಂದನು: "ಅನಾಥತ್ವವನ್ನು ಯಥಾಭೂತವಾಗಿ ನನಗೆ ಚೆನ್ನಾಗಿ ತೋರಿಸಿದೆ. (54)

"ನಿನ್ನ ಮಾನುಷಜನ್ಮವನ್ನು ಸಾರ್ಥಕಗೊಳಿಸಿದೆ; ಒಳ್ಳೆಯ ಲಾಭವನ್ನು ಪಡೆದೆ, ಮಹರ್ಷಿ. ನೀನು ಜಿನೋತ್ತಮರ ಮಾರ್ಗದಲ್ಲಿ ಹೊಕ್ಕು ನಿನಗೂ ನಿನ್ನ ಬಾಂಧವರಿಗೂ ನಾಥನಾಗಿರುವೆ. (55)

"ಹೇ ಸಂಯತ, ನೀನು ಅನಾಥರಾದ ಸರ್ವಭೂತಗಳಿಗೂ ನಾಥನು. ನನ್ನನ್ನು ಕ್ಷಮಿಸು, ಮಹಾಭಾಗ. ನನಗೆ ಅನುಶಾಸನೆ ಮಾಡಬೇಕೆಂದು ಬಯಸುತ್ತೇನೆ. (56)

"ನುಡಿಸಿ ನಿನ್ನ ಧ್ಯಾನಕ್ಕೆ ವಿಘ್ನ ತಂದುದನ್ನೂ, ಭೋಗಗಳಿಗೆ ನಿನ್ನನ್ನು ಕರೆದುದನ್ನೂ, ಸರ್ವವನ್ನೂ ನೀನು ಮನ್ನಿಸು." (57)

---

1. ನರಕದ ಒಂದು ನದಿ. 2. ನರಕದ ಒಂದು ವೃಕ್ಷ. 3. ಮುಂದಿನ ಹದಿನಾರು ಪದ್ಯಗಳು ಪ್ರಕ್ಷಿಪ್ತವೆಂದು ಪಂಡಿತರ ಅಭಿಪ್ರಾಯ.

ಹೀಗೆ ಆ ರಾಜಸಿಂಹನು ಆ ಅನಾಗಾರ್ಯಸಿಂಹನನ್ನು ಪರಮ ಭಕ್ತಿಯಿಂದ ಸ್ತುತಿಸಿ, ತನ್ನ ಹೆಂಡಿರು ಪರಿಜನರು ಬಾಂಧವರು ಸಹಿತವಾಗಿ ವಿಮಲವಾದ ಚಿತ್ತದಿಂದ ಧರ್ಮದಲ್ಲಿ ಅನುರಕ್ತನಾದನು. (58)

ಆ ನರಾಧಿಪನು ಉತ್ಸಾಹದಿಂದ, ರೋಮಾಂಚಗೊಂಡು, ಪ್ರದಕ್ಷಿಣೆ ಮಾಡಿ, ಶಿರಸಾ ಅಭಿವಂದಿಸಿ, ಹೊರಟನು. (59)

ಗುಣಸಮೃದ್ಧನಾದ ಇತರನು, ಮೂರು ಗುಪ್ತಿಗಳನ್ನು ಕಾಪಾಡಿ, ಮೂರು ದಂಡ[1]ಗಳಲ್ಲಿ ವಿರತನಾಗಿ, ಬಿಡುಗಡೆಪಡೆದ ಹಕ್ಕಿಯಂತೆ, ಮೋಹ ಹೋದವನಾಗಿ ಭೂಮಿಯಲ್ಲಿ ವಿಹರಿಸಿದನು. (60)

ಎಂದು ಹೇಳುತ್ತೇನೆ.

1. ಮೈ ಮಾತು ಮನಸ್ಸುಗಳಿಂದ ಜೀವಿಗಳಿಗೆ ಹಿಂಸೆ ಮಾಡುವುದು.

## ೭. ರಥನೇಮಿ

(‘ರಥನೇಮೀಯ’ ಎಂಬ ಇಪ್ಪತ್ತೆರಡನೆಯ ಅಧ್ಯಯನ.)

ರಾಜಲಕ್ಷಣಗಳಿಂದ ಕೂಡಿ ಮಹಾ ಬುದ್ಧಿಮಂತನಾದ ವಸುದೇವನೆಂಬ ಹೆಸರಿನ ರಾಜನು ಸೌರ್ಯಪುರವೆಂಬ ನಗರದಲ್ಲಿದ್ದನು. (1)

ಅವನಿಗೆ ರೋಹಿಣೀ ದೇವಕಿ ಎಂಬ ಇಬ್ಬರು ಹೆಂಡಿರು. ಅವರಿಬ್ಬರಿಗೂ ರಾಮ ಕೇಶವರೆಂಬ ಇಷ್ಟರಾದ ಮಕ್ಕಳು. (2)

ರಾಜಲಕ್ಷಣಗಳಿಂದ ಕೂಡಿ ಮಹಾಬುದ್ಧಿಮಂತನಾದ ಸಮುದ್ರವಿಜಯನೆಂಬ ಹೆಸರಿನ ರಾಜನು ಸೌರ್ಯಪುರವೆಂಬ ನಗರದಲ್ಲಿದ್ದನು. (3)

ಅವನ ಹೆಂಡತಿಯ ಹೆಸರು ಶಿವಾ. ಲೋಕನಾಥನೂ ದಮೀಶ್ವರನೂ ಆದ ಭಗವಾನ್ ಅರಿಷ್ಟನೇಮಿಯು ಅವಳ ಮಹಾಯಶಸ್ವಿನ ಮಗ. (4)

ಆ ಅರಿಷ್ಟನೇಮಿಯು ಸ್ವರ ಲಕ್ಷಣಗಳಿಂದ ಕೂಡಿದವನು; ಸಾವಿರದೆಂಟು ಲಕ್ಷಣಗಳನ್ನು ಧರಿಸಿದವನು; ಗೌತಮನು. ಅವನ ಕಾಂತಿ ಕಪ್ಪು. (5)

ಅವನದು ವೃಷಭದಂತಹ ವಜ್ರದೇಹ, ಉಕ್ಕಿನ ಬಾಣದಂತೆ ಬಲವಾದುದು. ಸಮಚತುರಸ್ರನಾದ ಅವನ ಹೊಟ್ಟೆಯು ಮೀನಿನಂತಹದು.

ಕನ್ಯೆ ರಾಜೀಮತಿಯು[1] ಅವನ ಹೆಂಡತಿಯಾಗಬೇಕೆಂದು ಕೇಶವನು ಯಾಚಿಸಿದನು. (6)

ಆ ರಾಜವರನ ಕನ್ಯೆಯು ಸುಶೀಲೆಯಾಗಿ ನೋಟಕ್ಕೆ ಚೆನ್ನಾಗಿದ್ದಳು. ಸರ್ವ ಲಕ್ಷಣ ಸಂಪನ್ನೆಯಾಗಿ, ಸೌದಾಮಿನಿಯೆಂಬ ಮಿಂಚಿನಂತೆ ಹೊಳೆಯುತ್ತಿದ್ದಳು. (7)

ಅವಳ ತಂದೆಯು "ಕುಮಾರನು ಇಲ್ಲಿ ಬರಲಿ. ಅವನಿಗೆ ಕನ್ಯೆಯನ್ನು ಕೊಡೋಣ" ಎಂದು ಮಹಾ ಬುದ್ಧಿಮಂತನಾದ ವಾಸುದೇವನಿಗೆ ಹೇಳಿದನು. (8)

---

1. ಉಗ್ರಸೇನನ ಮಗಳು.

ಸರ್ವ ಓಷಧಿಗಳಲ್ಲಿ ಸ್ನಾನಮಾಡಿ, ಮಾಡಬೇಕಾದ ಮಂಗಲಗಳನ್ನು ಮಾಡಿಕೊಂಡು, ದಿವ್ಯವಾದ ಬಟ್ಟೆಗಳನ್ನು ಧರಿಸಿ, ಆಭರಣಗಳಿಂದ ಅಲಂಕಾರಮಾಡಿಕೊಂಡು, (ಭಗವಾನ್ ಅರಿಷ್ಟನೇಮಿಯು) (9)

ವಾಸುದೇವನ ಶ್ರೇಷ್ಠವಾದ ಮದಿಸಿದ ಗಂಧಹಸ್ತಿಯನ್ನು ಏರಿ, ತಲೆಯ ಚೂಡಾಮಣಿಯಂತೆ ಅಧಿಕವಾಗಿ ಶೋಭಿಸುತ್ತಿದ್ದನು. (10)

ಎತ್ತಿದ ಛತ್ರ ಚಾಮರಗಳಿಂದ ಅವನು ಶೋಭಿಸುತ್ತಿದ್ದನು. ದಶಾರ್ಹರ ಬಳಗವು ಅವನ ಸುತ್ತ ಬಳಸಿತ್ತು. (11)

ಚತುರಂಗ ಸೇನೆಯು ಯಥಾಕ್ರಮವಾಗಿ ರಚಿತವಾಗಿತ್ತು. ತೂರ್ಯಗಳ ದಿವ್ಯವಾದ ಸದ್ದು ಗಗನವನ್ನು ಮುಟ್ಟಿತ್ತು. (12)

ಈ ರೀತಿಯಾದ ಋದ್ಧಿಯಿಂದಲೂ ಉತ್ತಮವಾದ ದ್ಯುತಿಯಿಂದಲೂ ಆ ವೃಷ್ಣಿ ಪುಂಗವನು ತನ್ನ ಭವನದಿಂದ ಹೊರಟನು. (13)

ಹೋಗುವಾಗ, ಭಯಗೊಂಡು ದುಃಖಪಡುತ್ತಿರುವ ಪ್ರಾಣಿಗಳನ್ನು ಪಂಜರಗಳಲ್ಲಿಯೂ ಕಟಕಟೆಗಳಲ್ಲಿಯೂ ತಡೆದಿಟ್ಟುದನ್ನು ಕಂಡನು. (14)

ಮಾಂಸಕ್ಕಾಗಿ, ಅನಂತರ ತಿನ್ನಲು, ಅವುಗಳಿಗೆ ಕಡೆಗಾಲ ಸಮೀಪಿಸಿರುವುದನ್ನು ಆ ಮಹಾಪ್ರಜ್ಞನು ಕಂಡು, ಸಾರಥಿಗೆ[1] ಹೀಗೆಂದನು: (15)

"ಸುಖವನ್ನು ಬಯಸುವ ಈ ಎಲ್ಲ ಪ್ರಾಣಿಗಳನ್ನೂ ಪಂಜರಗಳಲ್ಲಿಯೂ ಕಟಕಟೆಗಳಲ್ಲಿಯೂ ತಡೆದು ನಿಲ್ಲಿಸಿರುವರೇಕೆ?" (16)

ಆಗ ಸಾರಥಿಯು "ಈ ಪ್ರಾಣಿಗಳ ಪುಣ್ಯ ಒಳ್ಳೆಯದು; ನಿನ್ನ ಮದುವೆಯಲ್ಲಿ ಅನೇಕ ಜನರಿಗೆ ಊಟ ಒದಗಿಸುವುವು" ಎಂದನು. (17)

ಅನೇಕ ಪ್ರಾಣಿಗಳ ವಿನಾಶವನ್ನು ಕುರಿತ ಅವನ ಮಾತು ಕೇಳಿ, ಆ ಮಹಾಪ್ರಾಜ್ಞನು ಜೀವಿಗಳ ಮೇಲಿನ ದಯೆಯಿಂದ ಚಿಂತಿಸಿದನು: (18)

"ನನ್ನ ಕಾರಣದಿಂದ ಈ ಅನೇಕ ಜೀವಗಳು ಹತವಾಗುವುವು. ಇದರಿಂದ ನನಗೆ ಪರಲೋಕದಲ್ಲಿ ಶ್ರೇಯಸ್ಸು ಉಂಟಾಗುವುದಿಲ್ಲ." (19)

ಆ ಮಹಾಯಶಸ್ವಿಯು ತನ್ನ ಎರಡು ಕುಂಡಲಗಳನ್ನೂ ಸೂತ್ರಕವನ್ನೂ ಸರ್ವ ಆಭರಣಗಳನ್ನೂ ಸಾರಥಿಗೆ ಒಪ್ಪಿಸಿದನು. (20)

---

1. ಅರಿಷ್ಟನೇಮಿಯು ಆನೆಯ ಮೇಲೆ ಬಂದನೆಂದು ಮೇಲೆ ಹೇಳಿದೆ.

ಹೀಗೆ ಮನಸ್ಸು ಪರಿಣಮಿಸಲು, ಆತನ ನಿಷ್ಕ್ರಮಣವನ್ನು ಆಚರಿಸುವುದಕ್ಕಾಗಿ ದೇವರುಗಳು ಸರ್ವ ಋದ್ಧಿಗಳೊಡನೆ, ತಮ್ಮ ಪರಿಷೆಯೊಡನೆ ಯಥೋಚಿತವಾಗಿ ಇಳಿದುಬಂದರು. (21)

ದೇವರಿಂದಲೂ ಮನುಷ್ಯರಿಂದಲೂ ಬಳಸಲ್ಪಟ್ಟು, ಶಿಬಿಕಾರತ್ನವನ್ನು ಹತ್ತಿ, ಭಗವಂತನು ದ್ವಾರಕೆಯಿಂದ ಹೊರಟು ರೈವತಕ[1]ದಲ್ಲಿ ನಿಂತನು. (22)

ಉದ್ಯಾನವು ಸಿಕ್ಕಲು, ಉತ್ತಮವಾದ ಶಿಬಿಕೆಯಿಂದ ಇಳಿದು, ಸಾವಿರಗಳಿಂದ ಬಳಸಲ್ಪಟ್ಟು, ಚಿತ್ರಾನಕ್ಷತ್ರದಲ್ಲಿ ನಿಷ್ಕ್ರಮಿಸಿದನು. (23)

ಆಗ ಅವನು ತನ್ನ ಸುಗಂಧಹಾಕಿದ ಮೃದುವಾದ ಸುಳಿಗುರುಳುಗಳನ್ನು ತಾನೇ ಐದು ಮುಷ್ಟಿಗಳಲ್ಲಿ ಸಮಾಹಿತನಾಗಿ ಲುಂಚಮಾಡಿಕೊಂಡನು. (24)

ಆ ಕೂದಲನ್ನು ಲುಂಚಮಾಡಿಕೊಂಡ ಜಿತೇಂದ್ರಿಯನಿಗೆ ವಾಸುದೇವನು ಹೀಗೆಂದನು: "ಹೇ ದಮೀಶ್ವರ! ನೀನು ಬಯಸಿದ ಮನೋರಥವು ಬೇಗನೆ ದೊರಕಲಿ. (25)

"ಜ್ಞಾನದಿಂದ, ದರ್ಶನದಿಂದ, ಚಾರಿತ್ರದಿಂದ, ಕ್ಷಾಂತಿಯಿಂದ, ಮುಕ್ತಿಯಿಂದ ವರ್ಧಮಾನನಾಗು." (26)

ಹೀಗೆ ರಾಮ ಕೇಶವರೂ, ದಶಾರ್ಹರೂ, ಬಹು ಜನರೂ ಅರಿಷ್ಟನೇಮಿಯನ್ನು ವಂದಿಸಿ, ದ್ವಾರಕಾಪುರಿಗೆ ಹಿಂದಿರುಗಿದರು. (27)

ಆ ಜಿನನ ಪ್ರವ್ರಜ್ಯವನ್ನು ಕೇಳಿ, ರಾಜಕನ್ಯೆಯ ನಗು ಹೋಯಿತು; ಆನಂದ ಹೋಯಿತು. ಅವಳು ಶೋಕದಿಂದ ಕುಗ್ಗಿದಳು. (28)

ರಾಜೀಮತಿಯು "ನನ್ನ ಜೀವಿತಕ್ಕೆ ಧಿಕ್ಕಾರ! ಅವನಿಂದ ಪರಿತ್ಯಕ್ತಳಾಗಿರುವುದಕ್ಕಿಂತ ನಾನು ಪರಿವ್ರಜಿಸುವುದೆ ಮೇಲು" ಎಂದು ಚಿಂತಿಸಿದಳು. (29)

ಆ ಧೃತಿಮತಿಯು ವ್ಯವಸ್ಥಿತಳಾಗಿ, ಹಣಿಗೆಯಿಂದ ಬಾಚಿದ ತನ್ನ ದುಂಬಿಯಂತಹ ಕುರುಳನ್ನು ತಾನೇ ಲುಂಚಮಾಡಿಕೊಂಡಳು. (30)

ಆ ಕೂದಲು ಲುಂಚಮಾಡಿಕೊಂಡ ಜಿತೇಂದ್ರಿಯಳಿಗೆ ವಾಸುದೇವನು "ಕನ್ಯೆ, ಘೋರವಾದ ಸಂಸಾರಸಾಗರವನ್ನು ಬೇಗ ಬೇಗ ದಾಟು" ಎಂದನು. (31)

1. ಕಾಥೆವಾಡದ ಗಿರಿನಾರ್ ಪರ್ವತ.

ಶೀಲವತಿಯೂ ಬಹುಶ್ರುತೆಯೂ ಆದ ಆ ಸತಿಯು ತಾನು ಪರಿವ್ರಜಿಸಿ, ಅನೇಕ ಸ್ವಜನರನ್ನೂ ಪರಿಜನರನ್ನೂ ಪರಿವ್ರಜಿಸುವಂತೆ ಮಾಡಿದಳು. (32)

ರೈವತಕ ಗಿರಿಗೆ ಹೋಗುವಾಗ ಮಳೆಯಲ್ಲಿ ಬಟ್ಟೆ ನೆನೆಯಲು, ಮಳೆಗಾಲದ ಕತ್ತಲೆಯಲ್ಲಿ ಗುಹೆಯ ಒಳಗೆ ನಿಂತಳು. (33)

ಬಟ್ಟೆಗಳನ್ನು ಕಳಚಿ ಹುಟ್ಟಿದಂತಿದ್ದುದನ್ನು ಕಂಡು ರಥನೇಮಿ[1]ಯ ಚಿತ್ತ ಮುರಿಯಿತು. ಅವಳು ಅವನನ್ನು ಅನಂತರ ಕಂಡಳು. (34)

ಒಬ್ಬ ಸಂಯತನನ್ನು ಏಕಾಂತದಲ್ಲಿ ಕಂಡು ಆಕೆ ಭಯಗೊಂಡಳು. ತೋಳುಗಳಿಂದ ಮರೆಮಾಡಿಕೊಂಡು ನಡುಗುತ್ತ ಕುಸಿದು ಕುಳಿತಳು. (35)

ಆಗ ಸಮುದ್ರವಿಜಯನ ಮಗನಾದ ಆ ರಾಜಪುತ್ರನು ಭಯಗೊಂಡು ನಡುಗುತ್ತಿರುವ ಅವಳನ್ನು ಕಂಡು, ಈ ಮಾತು ಹೇಳಿದನು: (36)

"ಭದ್ರೇ! ಸುರೂಪೇ! ಚಾರುಭಾಷಿಣೀ! ನಾನು ರಥನೇಮಿ. ನನ್ನನ್ನು ವರಿಸು, ಸುತನು! ನಿನಗೆ ಏನೂ ಪೀಡೆಯಾಗದು. (37)

"ಬಾ, ಭೋಗಗಳನ್ನು ಸವಿಯೋಣ. ಮನುಷ್ಯಜನ್ಮ ಸಿಕ್ಕುವುದು ಕಷ್ಟ. ಭೋಗಗಳನ್ನು ಸವಿದು, ಅನಂತರ ಜಿನಮಾರ್ಗವನ್ನು ನಡೆಯೋಣ." (38)

ರಥನೇಮಿಯ ಉದ್ಯೋಗವು ಭಗ್ನವಾಗಿ ಅವನು ಸೋತುದನ್ನು ಕಂಡು, ರಾಜೀಮತಿಯು ಸಂಭ್ರಾಂತಳಾಗದೆ, ಅಲ್ಲಿ ತನ್ನ ಆತ್ಮವನ್ನು ಸಂವರಿಸಿದಳು. (39)

ಆ ರಾಜವರನ ಕನ್ಯೆಯು ತನ್ನ ವ್ರತ ನಿಯಮಗಳಲ್ಲಿ ಸುಸ್ಥಿತೆಯಾಗಿ, ತನ್ನ ಜಾತಿ ಕುಲ ಶೀಲಗಳನ್ನು ಕಾಪಾಡಿಕೊಂಡು ಹೀಗೆಂದಳು: (40)

"ನೀನು ರೂಪದಲ್ಲಿ ವೈಶ್ರಮಣನಾಗು; ಲಾಲಿತ್ಯದಲ್ಲಿ ನಳಕೂಬರನಾಗು; ನೀನು ಸಾಕ್ಷಾತ್ ಪುರಂದರನೇ ಆಗು;—ನಾನು ನಿನ್ನನ್ನು ಬಯಸುವುದಿಲ್ಲ. (41)

"ಅಯಶಸ್ಸನ್ನು ಬಯಸುವ ನಿನಗೆ ಧಿಕ್ಕಾರ. ಜೀವಿಸಬೇಕೆಂದು ನೀನು ವಾಂತಿಯನ್ನು ಕುಡಿಯಬಯಸುವೆ. ನಿನಗೆ ಮರಣವಾಗುವುದೆ ಮೇಲು. (42)

---

1. ಅರಿಷ್ಟನೇಮಿಯ ಅಣ್ಣ.

"ನಾನು ಭೋಗರಾಜನವಳು, ನೀನು ಅಂಧಕವೃಷ್ಣಿ; ನಾವು ಗಂಧನ[1]ಗಳಂತೆ ಆಗುವುದು ಬೇಡ. ಸಂಯಮವನ್ನು ದೃಢವಾಗಿ ಆಚರಿಸು. (43)

"ಕಂಡ ಕಂಡ ಹೆಂಗಸರನ್ನೆಲ್ಲ ನೀನು ಭಾವಿಸಿದರೆ, ಗಾಳಿಗೆ ಸಿಕ್ಕಿದ ಹಠ[2]ದಂತೆ ನೀನು ಅಸ್ಥಿತವಾದ ಆತ್ಮವುಳ್ಳವನಾಗುವೆ. (44)

"ಗೋಪಾಲನಿಗಾಗಲಿ ಭಂಡಪಾಲನಿಗಾಗಲಿ ಆ ಪದಾರ್ಥದ ಮೇಲೆ ಒಡೆತನವಿಲ್ಲದಿರುವಂತೆ ನಿನಗೂ ಶ್ರಮಣತ್ವದಲ್ಲಿ ಒಡೆತನವಿಲ್ಲದ ಹೋಗುವುದು." (45)

ಆ ಸಂಯಮಿಯ ಸುಭಾಷಿತವಾದ ಮಾತನ್ನು ಕೇಳಿ, ಆನೆ ಅಂಕುಶದಿಂದ ಹೇಗೋ ಹಾಗೆ, (ರಥನೇಮಿಯು) ಧರ್ಮಕ್ಕೆ ಮರಳಿಬಂದನು. (46)

ಮನಸ್ಸು ಮಾತು ಮೈಗಳನ್ನು ಗೋಪನಮಾಡಿ, ಜಿತೇಂದ್ರಿಯನಾಗಿ, ದೃಢವ್ರತನಾಗಿ, ಜೀವವಿರುವವರೆಗೂ ಶ್ರಾಮಣ್ಯವನ್ನು ನಿಶ್ಚಲವಾಗಿ ನಡೆಸಿದನು. (47)

ಉಗ್ರವಾದ ತಪಸ್ಸನ್ನು ಆಚರಿಸಿ, ಇಬ್ಬರೂ ಕೇವಲಿಗಳಾದರು. ಸರ್ವ ಕರ್ಮವನ್ನು ಕ್ಷಯಗೊಳಿಸಿ, ಅನುತ್ತರವಾದ ಸಿದ್ಧಿಯನ್ನು ಪಡೆದರು. (48)

ಸಂಬುದ್ಧರು, ಪಂಡಿತರು, ಪ್ರವಿಚಕ್ಷಣರು ಹೀಗೆ ಮಾಡುವರು; ಈ ಪುರುಷೋತ್ತಮನಂತೆ ಭೋಗಗಳಿಂದ ವಿಮುಖರಾಗುವರು. (49)

ಎಂದು ಹೇಳುತ್ತೇನೆ.

---

1. ಹಾವುಗಳಲ್ಲಿ ಎರಡು ತೆರ—ಗಂಧನ, ಅಗಂಧನ; ಗಂಧನಗಳು ಕಚ್ಚಿದನಂತರ ಕೆಲವು ವೇಳೆ ವಿಷವನ್ನು ಹಿಂದಕ್ಕೆ ಸೆಳೆದುಕೊಳ್ಳುವುವು. ಆದರೆ ಅಗಂಧನಗಳು ಜೀವವನ್ನಾದರೂ ಬಿಟ್ಟಾವಲ್ಲದೆ, ಬಿಟ್ಟ ವಿಷವನ್ನು ಮತ್ತೆ ಹೀರವು.

2. ನೀರಿನಲ್ಲಿ ಬೆಳೆವ ಲತೆ; ಗಾಳಿ ಬೀಸಿದತ್ತ ನೆಲೆಯಿಲ್ಲದೆ ಜಾರುವುದು.

## ೮. ಹರಿಕೇಶಬಲ[1]

('ಹರಿಕೇಶೀಯ' ಎಂಬ ಹನ್ನೆರಡನೆಯ ಅಧ್ಯಯನ.)

ಶ್ವಪಾಕ[2]ಕುಲದಲ್ಲಿ ಹುಟ್ಟಿ ಉತ್ತರವಾದ ಗುಣಗಳನ್ನು ಧರಿಸಿದ ಮುನಿಯು, ಹರಿಕೇಶಬಲನೆಂಬ ಹೆಸರಿನ ಜಿತೇಂದ್ರಿಯನಾದ ಭಿಕ್ಷು, ಇದ್ದನು. (1)

ಈರ್ಯಾ, ಏಷಣಾ, ಭಾಷಾ, ಉಚ್ಚಾರ, ಆದಾನನಿಕ್ಷೇಪಗಳೆಂಬ ಸಮಿತಿಗಳೊಡನೆ ಸಂಯತನಾಗಿ ಸುಸಮಾಹಿತನಾಗಿದ್ದನು. (2)

ಮನಸ್ಸು, ಮಾತು, ಮೈಗಳಿಂದ ಗುಪ್ತಿಯನ್ನು ನಡೆಸಿ, ಜಿತೇಂದ್ರಿಯನಾಗಿ, (ಒಂದು ಸಲ) ಭಿಕ್ಷೆಗಾಗಿ ಬ್ರಾಹ್ಮಣರ ಯಜ್ಞವಾಟದ ಬಳಿಸಾರಿದನು. (3)

ತಪಸ್ಸಿನಿಂದ ಪರಿಶೋಷಿಸಿ ಕಂಗಾಲಾಗಿ, ದರಿದ್ರವೇಷದಲ್ಲಿ ಬರುವ ಅವನನ್ನು ಕಂಡು ಆ ಅನಾರ್ಯರು ನಕ್ಕರು. (4)

ಜಾತಿಮದದಿಂದ ಪ್ರತಿಸ್ತಬ್ಧರಾದ ಅವರು, ಆ ಹಿಂಸಕರು, ಇಂದ್ರಿಯಗಳನ್ನು ಜಯಿಸದವರು, ಅಬ್ರಹ್ಮಚಾರಿಗಳಾದ ಆ ಅಜ್ಞಾನಿಗಳು, ಈ ಮಾತು ಹೇಳಿದರು: (5)

"ಈ ದೀಪ್ತರೂಪನು, ಕರಿಯ ಕರಾಲನು, ಮೊಂಡು ಮೂಗನು, ಹರಕುಬಟ್ಟೆಯವನು, ಕೊಳಕುಪಿಶಾಚಿಯು, ಕತ್ತಿನಲ್ಲಿ ಕೊಳೆಬಟ್ಟೆ ಕಟ್ಟಿಕೊಂಡವನು ಇವನು ಯಾರು? (6)

---

1. ಗಂಗಾತೀರದಲ್ಲಿ ಬಲಕೋಷ್ಟನೆಂಬ ಚಂಡಾಲನಾಯಕ. ಇವನಿಗೆ ಹಳದಿಯ ಕೂದಲಿನ ಹರಿಕೇಶನೆಂಬ ಮಗ. ಈತನು ಕಾಲಾನುಕಾಲದಲ್ಲಿ ಜೈನದೀಕ್ಷೆ ಪಡೆದು ಋಷಿಯಾದನು. ಒಮ್ಮೆ ವಾರಣಾಸಿಯ ಬಳಿಯ ತಿಂದುಕ ವೃಕ್ಷದಡಿ ತಂಗಿದ್ದನು. ಆ ವೃಕ್ಷದ ಯಕ್ಷನು ಹರಿಕೇಶನ ಶಿಷ್ಯನಾದನು. ಒಮ್ಮೆ ರಾಜಾ ಕೌಶಲಿಕನ ಮಗಳಾದ ಭದ್ರೆಯು ಆ ಯಕ್ಷನಿಗೆ ಪೂಜೆಮಾಡಲು ಬಂದು ಹರಿಕೇಶಮುನಿಯನ್ನು ಕಂಡು ಅಸಹ್ಯಗೊಂಡಳು. ಅದಕ್ಕೆ ಆ ಯಕ್ಷನು ಕುಪಿತನಾಗಿ ಅವಳ ಮೇಲೆ ಬಂದು 'ಈಕೆಯು ಹರಿಕೇಶನನ್ನು ಮದುವೆಯಾದರೆ ನಾನು ಬಿಟ್ಟುಹೋಗುತ್ತೇನೆ' ಎಂದನು. ದೊರೆಯು ಒಪ್ಪಲು, ಯಕ್ಷನು ಅವಳನ್ನು ಬಿಟ್ಟುಹೋದನು. ಆದರೆ ಹರಿಕೇಶನು ಆಕೆಯನ್ನು ಮದುವೆಯಾಗಲು ಒಪ್ಪಲಿಲ್ಲ. ಆಗ ಆಕೆಯನ್ನು ಕೌಶಲಿಕನು ರುದ್ರದೇವನೆಂಬ ಪುರೋಹಿತನಿಗೆ ಮದುವೆಮಾಡಿದನು. ಆ ಪುರೋಹಿತನ ಯಜ್ಞಕ್ಕೇ ಈ ಅಧ್ಯಯನದಲ್ಲಿ ಹರಿಕೇಶನು ಬಂದಿರುವುದು. 2. ಚಂಡಾಲ.

"ನೀನಾರೊ ನೀನು, ಅದರ್ಶನೀಯ? ಏನು ಆಸೆಯಿಂದ ಇಲ್ಲಿಗೆ ಬಂದೆ? ಹರಕುಬಟ್ಟೆಯ ಕೊಳಕುಪಿಶಾಚಿ! ನಡೆ, ತೊಲಗು! ಏಕಿಲ್ಲಿ ನಿಲುವೆ?" (7)

ಆಗ, ತಿಂದುಕವೃಕ್ಷದಲ್ಲಿ ವಾಸಿಸುತ್ತಿದ್ದ ಯಕ್ಷನು ಆ ಮಹಾ ಮುನಿಯ ಮೇಲಿನ ಅನುಕಂಪದಿಂದ ತನ್ನ ಶರೀರವನ್ನು ಮರೆಮಾಡಿ, ಈ ಮಾತು ಹೇಳಿದನು: (8)

"ನಾನು ಶ್ರಮಣ, ಸಂಯಮಿ, ಬ್ರಹ್ಮಚಾರಿ; ಧನ, ಪಚನ[1], ಪರಿಗ್ರಹಗಳನ್ನು ಬಿಟ್ಟವನು. ಭಿಕ್ಷಾಕಾಲದಲ್ಲಿ, ಪರರಿಗಾಗಿ ಅಟ್ಟ ಅನ್ನ ಕ್ಕೋಸ್ಕರ ಇಲ್ಲಿ ನಾನು ಬಂದಿದ್ದೇನೆ. (9)

"ಕೊಡುವಿರಿ, ತಿನ್ನುವಿರಿ, ರಾಶಿ ಅನ್ನ ಉಣ್ಣುವಿರಿ. ನಾನು ಯಾಚನೆ ಯಿಂದ ಜೀವಿಸುವೆನೆಂಬುದನ್ನು ತಿಳಿಯಿರಿ. ಮಿಕ್ಕು ಉಳಿದುದು ತಪಸ್ವಿಗೆ ಲಭಿಸಲಿ." (10)

"ಭೋಜನವು ಬ್ರಾಹ್ಮಣರಿಗಾಗಿ ಮಾಡಲಾದುದು, ಕೇವಲ ನಮ ಗೋಸ್ಕರವೇ ಸಿದ್ಧವಾದುದು. ಇಂತಹ ಅನ್ನಪಾನಗಳನ್ನು ನಿನಗೆ ನಾವು ಕೊಡುವುದಿಲ್ಲ. ಏಕೆಲ್ಲಿ ನಿಂತಿರುವೆ?" (11)

"ಕೃಷಿಕನು ಬೀಜವನ್ನು ಏರಿನಲ್ಲಿ ಬಿತ್ತುವನು; ಅಂತೆಯೇ ಆಸೆ ಯಿಂದ ತಗ್ಗಿನಲ್ಲೂ (ಬಿತ್ತುವನು). ಇದೇ ಶ್ರದ್ಧೆಯಿಂದ ನನಗೆ ಕೊಡಿರಿ. ಈ ಪುಣ್ಯಕ್ಷೇತ್ರವನ್ನು ಆರಾಧಿಸಿರಿ." (12)

"ದಾನಗಳು ಬೆಳೆದು ಪುಣ್ಯಗಳಾಗುವ ಕ್ಷೇತ್ರಗಳು ನಾವೆಂದು ಲೋಕ ತಿಳಿದಿದೆ. ಜಾತಿ ವಿದ್ಯೆಗಳಿಂದ ಕೂಡಿದ ಬ್ರಾಹ್ಮಣರು ಸುಪೇಶಲವಾದ ಕ್ಷೇತ್ರಗಳು." (13)

"ಕ್ರೋಧ ಮಾನಗಳಿಂದ ಕೂಡಿ, ಕೊಂದು, ಸುಳ್ಳಾಡಿ, ಕದ್ದು, ಪರಿಗ್ರಹಿಸುವ ಬ್ರಾಹ್ಮಣರು ಜಾತಿ ವಿದ್ಯೆಗಳಿಲ್ಲದವರು. ಅವರು ಬಹು ಪಾಪಕವಾದ ಕ್ಷೇತ್ರಗಳು. (14)

"ಭೋ! ನೀವು ಮಾತಿನ ಭಾರ ಹೊತ್ತವರು. ವೇದಗಳನ್ನು ಕಲಿತೂ ಅದರ ಅರ್ಥ ತಿಳಿಯಿರಿ. ಮೇಲು ಕೀಳುಗಳಲ್ಲಿ ಸಂಚರಿಸುವ ಮುನಿಗಳು ಸುಪೇಶಲವಾದ ಕ್ಷೇತ್ರಗಳು." (15)

---

1. ಸಂನ್ಯಾಸಿಗಳು ತಾವು ಅಡುಗೆ ಮಾಡಕೂಡದು.

"ಅಧ್ಯಾಪಕರಿಗೆ ಪ್ರತಿಕೂಲ ನುಡಿಯುವವನೆ! ನಮ್ಮೆದುರಿಗೆಯೆ ಹೀಗೆ ಹೇಳುವೆಯ! ಈ ಅನ್ನಪಾನಗಳು ನಾಶವಾದರು ಸಮನೆ; ನಿನಗೆ ಇವನ್ನು ಕೊಡವೊಲ್ಲೆವು, ನಿರ್ಗ್ರಂಥ[1]!" (16)

"ಸಮಿತಿಗಳಿಂದ ಸಮಾಹಿತನಾಗಿ, ಗುಪ್ತಿಗಳಿಂದ ಗುಪ್ತನಾಗಿ, ಜಿತೇಂದ್ರಿಯನಾದ ನನಗೆ ನಾನು ಅರಸುವುದನ್ನು ಕೊಡದಿದ್ದರೆ ಈ ಯಜ್ಞಗಳಿಂದ ಏನು ಲಾಭಹೊಂದುವಿರಿ?" (17)

"ಇಲ್ಲಿ ಕ್ಷತ್ರಿಯರಾಗಲಿ, ಉಪಜ್ಯೋತಿಷರಾಗಲಿ, ಶಿಷ್ಯರೊಡಗೂಡಿದ ಅಧ್ಯಾಪಕರಾಗಲಿ ಇಲ್ಲವೆ? ದೊಣ್ಣೆಯಿಂದಲೋ ಹಲಗೆಯಿಂದಲೋ ಇವನನ್ನು ಬಡಿದು, ಕತ್ತುಹಿಡಿದು ನೂಕುವವರಿಲ್ಲವೆ?" (18)

ಅಧ್ಯಾಪಕರ ಮಾತು ಕೇಳಿ ಅನೇಕ ಕುಮಾರರು ಓಡಿಬಂದು ದೊಣ್ಣೆ ಬೆತ್ತ ಕಶೆಗಳಿಂದ ಆ ಋಷಿಯನ್ನು ಬಡಿದರು. (19)

ಆಗ, ರಾಜಾ ಕೌಶಲಿಕನ ಮಗಳಾದ ಭದ್ರೆಯೆಂಬ ಅನಿಂದಿತಾಂಗಿಯು ಹತನಾಗುವ ಆ ಸಂಯಮಿಯನ್ನು ಕಂಡು, ಕ್ರುದ್ಧರಾದ ಆ ಕುಮಾರರನ್ನು ಸಮಾಧಾನಪಡಿಸಿದಳು: (20)

"ದೇವತೆಯಿಂದ ನಿಯೋಜಿಸಲ್ಪಟ್ಟು ದೊರೆಯು ನನ್ನನ್ನು ಇವನಿಗೆ ಕೊಟ್ಟರೆ, ನನ್ನನ್ನು ಇವನು ಮನಸ್ಸಿನಲ್ಲಿಯೂ ನೆನೆಯಲಿಲ್ಲ. ನರೇಂದ್ರರೂ ದೇವೇಂದ್ರರೂ ಇವನಿಗೆ ಅಭಿವಂದಿಸುವರು. ಈ ಋಷಿಯಿಂದ ಬಿಡಲ್ಪಟ್ಟವಳು ನಾನು. (21)

"ತಂದೆಯಾದ ರಾಜಾ ಕೌಶಲಿಕನು ನನ್ನನ್ನು ಕೊಡಬೇಕೆಂದಾಗ ಒಲ್ಲದೆ ಹೋದ ಈ ಉಗ್ರತಪಸ್ವಿಯು ಮಹಾತ್ಮನು, ಜಿತೇಂದ್ರಿಯನು, ಸಂಯಮಿಯು, ಬ್ರಹ್ಮಚಾರಿ. (22)

"ಈತನು ಮಹಾ ಯಶಸ್ವಿ, ಮಹಾನುಭಾಗನು, ಘೋರವ್ರತನು, ಘೋರಪರಾಕ್ರಮಿ. ನೋಯಿಸಲಾಗದವನನ್ನು ನೋಯಿಸಬೇಡಿರಿ. ತನ್ನ ಸರ್ವತೇಜಸ್ಸಿನಿಂದ ನಿಮ್ಮನ್ನು ಸುಟ್ಟಾನು!" (23)

(ಪುರೋಹಿತನ) ಪತ್ನಿಯಾದ ಭದ್ರೆಯ ಈ ಸುಭಾಷಿತವಾದ ಮಾತುಗಳನ್ನು ಕೇಳಿ, ಯಕ್ಷರು ಋಷಿಯ ನೆರವಿಗೆ ಬಂದು ಕುಮಾರರನ್ನು ತಡೆದರು. (24)

---

1. ಇಲ್ಲಿ ನಾಚಿಕೆಯಿಲ್ಲದವನು ಎಂದರ್ಥ.

ಅಸುರರು ಅಂತರಿಕ್ಷದಲ್ಲಿ ಘೋರರೂಪದಿಂದ ನಿಂತು ಆ ಜನರನ್ನು ಬಡಿದರು. ಅವರು ಮೈಮುರಿದು ರಕ್ತಕಾರುವುದನ್ನು ಕಂಡು ಭದ್ರೆಯು ಹೀಗೆಂದಳು: (25)

"ಉಗುರಿನಿಂದ ಬೆಟ್ಟವನ್ನು ಅಗೆಯಿರಿ. ಹಲ್ಲಿನಿಂದ ಕಬ್ಬಿಣ ಕಡಿಯಿರಿ. ಕಾಲಿನಿಂದ ಬೆಂಕಿ ಒದೆಯಿರಿ. ಅಂತೆಯೇ ಭಿಕ್ಷುವನ್ನು ಅವಮಾನಿಸಿರಿ. (26)

"ಉಗ್ರತಪಸ್ವಿನ ಮಹರ್ಷಿಯು, ಘೋರವ್ರತದ ಘೋರಪರಾಕ್ರಮಿಯು ವಿಷದ ಹಾವು. ಭಿಕ್ಷಾಕಾಲದಲ್ಲಿ ಭಿಕ್ಷುವನ್ನು ಬಡಿದರೆ, ಪತಂಗ ಸೇನೆಯಂತೆ ಬೆಂಕಿಗೆ ನುಗ್ಗುವಿರಿ. (27)

"ನಿನಗೆ ಜೀವದ ಮೇಲೆ ಧನದ ಮೇಲೆ ಆಸೆಯಿದ್ದರೆ, ಸರ್ವಜನರೊಡನೆ ನೀನೂ[1] ತಲೆಬಾಗಿ ಶರಣಾಗು. ಕುಪಿತನಾಗಿ ಲೋಕವನ್ನೆಲ್ಲ ದಹಿಸಿಯಾನು!" (28)

ಶಿಷ್ಯರು ಬೆನ್ನು ತಲೆಗಳನ್ನು ಬಗ್ಗಿಸಿ, ತೋಳುಗಳನ್ನು ನೀಡಿ, ತಮ್ಮ ಕಾರ್ಯಗಳನ್ನು ಮಾಡದೆ, ಕಣ್ಣೀರು ಹರಿಸಿ, ರಕ್ತಕಾರಿ, ಮುಖ ಮೇಲೆ ಮಾಡಿ, ನಾಲಗೆ ಕಣ್ಣುಗಳನ್ನು ಹೊರಚಾಚಿ—(29)

ಕಡಿದ ಕಟ್ಟಿಗೆಗಳಂತಿರುವುದನ್ನು ಕಂಡು; ಆ ಬ್ರಾಹ್ಮಣನು ಇಳಿಮನಸ್ಸಿನಿಂದ ವಿಷಣ್ಣನಾಗಿ, "ನಮ್ಮ ನೋವನ್ನೂ ನಿಂದೆಯನ್ನೂ ಕ್ಷಮಿಸು, ಭದಂತ!" ಎಂದು ತನ್ನ ಪತ್ನಿಯೊಡನೆ ಋಷಿಯನ್ನು ಪ್ರಸನ್ನಗೊಳಿಸಿದನು. (30)

"ನಿನ್ನನ್ನು ನೋಯಿಸಿದ ಈ ಬಾಲರನ್ನು, ಮೂಢರನ್ನು, ಅಜ್ಞರನ್ನು ಕ್ಷಮಿಸು, ಭದಂತ! ಋಷಿಗಳು ಮಹಾಪ್ರಸನ್ನರಾದವರು; ಮುನಿಗಳು ಕೋಪಪರರಾಗುವುದಿಲ್ಲ." (31)

"ಹಿಂದೆಯಾಗಲಿ, ಇಂದಾಗಲಿ, ಮುಂದಾಗಲಿ—ಎಂದೂ ನನ್ನ ಮನಸ್ಸಿನಲ್ಲಿ ದ್ವೇಷವಿಲ್ಲ. ಯಕ್ಷರು ನನ್ನನ್ನು ಸೇವಿಸುವರು; ಅದರಿಂದ ಕುಮಾರರು ಹೀಗೆ ಹತರಾದರು." (32)

"ನೀನು ಅರ್ಥ ಧರ್ಮಗಳನ್ನು ಅರಿತಿರುವೆ. ನಿನಗೆ ಕೋಪವಿಲ್ಲ. ನೀನು ದಯಾಳು. ನಾನು ಸರ್ವಜನರೊಡನೆ ನಿನ್ನ ಪಾದಗಳಿಗೆ ಶರಣಾಗುತ್ತೇನೆ. (33)

1. ಪುರೋಹಿತ ರುದ್ರದೇವ.

"ನಿನ್ನನ್ನು ಅರ್ಚಿಸುವೆವು, ಮಹಾಭಾಗ. ನಿನ್ನಲ್ಲಿ ಯಾವುದನ್ನೂ ನಾವು ಅರ್ಚಿಸದೆ ಇಲ್ಲ. ನಾನಾ ವ್ಯಂಜನಗಳಿಂದ ಕೂಡಿದ ಈ ಅಟ್ಟ ಅನ್ನವನ್ನು ಭುಂಜಿಸು. (34)

"ನನ್ನ ಬಳಿ ರಾಶಿ ಅನ್ನವಿದೆ. ನನ್ನ ಮೇಲಿನ ಅನುಗ್ರಹದಿಂದ ಇದನ್ನು ಭುಂಜಿಸು."

"ಒಳ್ಳೆಯದು" ಎಂದು, ಒಂದು ಮಾಸಕಾಲ ಪಾರಣೆಮಾಡಿದ ಆ ಮಹಾತ್ಮನು ಅನ್ನಪಾನಗಳನ್ನು ಸ್ವೀಕರಿಸಿದನು. (35)

ಆಗ ಸುರರು ಗಂಧೋದಕವನ್ನೂ ಪುಷ್ಪಗಳನ್ನೂ ಮಳೆಗರೆದು, ದಿವ್ಯವಾದ ವಸುಧಾರೆಯನ್ನು ಸುರಿಸಿ, ದುಂದುಭಿಗಳನ್ನು ಬಡಿದು, "ಅಹೋ, ದಾನ!" ಎಂದು ಆಕಾಶದಲ್ಲಿ ಘೋಷಿಸಿದರು. (36)

"ತಪಸ್ಸಿನ ವಿಶೇಷತೆಯು ಸಾಕ್ಷಾತ್ತಾಗಿ ಕಾಣುವುದು! ಜಾತಿಯ ವಿಶೇಷತೆಯು ಏನೂ ಕಾಣದು! ಶ್ವಪಾಕಪುತ್ರನಾದ ಹರಿಕೇಶ ಸಾಧುವಿಗೆ ಈ ರೀತಿಯ ಸಮೃದ್ಧಿ, ಮಹಾನುಭಾವತೆ!" (37)

"ಓ ಬ್ರಾಹ್ಮಣರೆ, ಅಗ್ನಿಯನ್ನೇಕೆ ಆರಾಧಿಸುವಿರಿ? ನೀರಿನಿಂದ ಬಾಹ್ಯ ಶುದ್ಧಿಯನ್ನೇಕೆ ಅರಸುವಿರಿ? ಹೊರಗಣ ವಿಶುದ್ಧಿಯನ್ನು ಹುಡುಕುವುದು ಯೋಗ್ಯವಾದುದಲ್ಲವೆಂದು ಕುಶಲರಾದವರು ಹೇಳುವರು. (38)

"ಕುಶ ಯೂಪ ತೃಣ ಕಾಷ್ಠ ಅಗ್ನಿಗಳನ್ನೂ ಸಂಜೆ ಬೆಳಗುಗಳಲ್ಲಿ ನೀರನ್ನೂ ಮುಟ್ಟುವಿರಿ. ಅದರಿಂದ ಅನೇಕ ಪ್ರಾಣಿಗಳು ಹತವಾಗುವುವು. ತಿಳಿಯದೆ ಪುನಃ ಪುನಃ ಪಾಪಮಾಡುವಿರಿ." (39)

"ನಾವು ಹೇಗೆ ಯಜ್ಞಮಾಡಬೇಕು, ಭಿಕ್ಷು? ಪಾಪಗಳನ್ನು ಹೇಗೆ ಹೋಗಲಾಡಿಸಬೇಕು? ಯಕ್ಷರಿಂದ ಪೂಜಿಸಲ್ಪಡುವ ಹೇ ಸಂಯತ, ಯಾವುದನ್ನು ಕುಶಲರು ಯೋಗ್ಯವೆನ್ನುವರು, ಹೇಳು." (40)

"ಆರು ಜೀವಕಾಯಗಳಿಗೂ ಹಿಂಸೆಮಾಡದೆ, ಸುಳ್ಳಾಡದೆ, ಕೊಡದುದನ್ನು ಕೊಳ್ಳದೆ, ಪರಿಗ್ರಹವನ್ನು ಬಿಟ್ಟು, ಸ್ತ್ರೀಯರನ್ನೂ ಮಾನ ಮಾಯೆಗಳನ್ನೂ ತೊರೆದು, ದಮನಮಾಡಿಕೊಂಡವರು ಚರಿಸುವರು. (41)

"ಐದು ಸಂವರಗಳಿಂದ ಚೆನ್ನಾಗಿ ಸಂವರಿಸಿಕೊಂಡವರು, ಈ ಜೀವಿತಕ್ಕೆ ಅಂಟಿಕೊಳ್ಳದವರು, ವ್ಯುತ್ಸೃಷ್ಟಕಾಯ[1]ದವರು, ಶುಚಿಯಾಗಿ ದೇಹದ

1. ಕಾಯೋತ್ಸರ್ಗದಲ್ಲಿ ನಿಂತವರು.

ಗೊಡವೆ ಬಿಟ್ಟವರು, ಶ್ರೇಷ್ಠ ಯಜ್ಞವಾದ ಮಹಾಜಯವನ್ನು ಜಯಿಸು ವರು." (42)

"ನಿನ್ನ ಅಗ್ನಿಯೆಲ್ಲಿ? ಜ್ಯೋತಿಸ್ಥಾನವೆಲ್ಲಿ? ನಿನ್ನ ಸ್ರುಚ[1]ವೆಲ್ಲಿ? ಕರೀಷಾಂಗ[2]ವೆಲ್ಲಿ? ನಿನ್ನ ಇಂಧನವಾವುದು, ಭಿಕ್ಷು? ಯಾವ ಹೋಮದಿಂದ ಅಗ್ನಿಯಲ್ಲಿ ಯಜನಮಾಡುವೆ?" (43)

"ತಪಸ್ಸು ಅಗ್ನಿ. ಜೀವವು ಜ್ಯೋತಿಸ್ಥಾನ. ಯೋಗವೆ ಸ್ರುಚ. ಶರೀರವೆ ಕರೀಷಾಂಗ. ಕರ್ಮವೆ ಕಟ್ಟಿಗೆ. ಋಷಿಗಳು ಕೀರ್ತಿಸಿರುವ ಸಂಯಮ ಯೋಗ ಶಾಂತಿಗಳ ಹೋಮದಿಂದ ಯಜನಮಾಡುತ್ತೇನೆ." (44)

"ನಿನ್ನ ಕೊಳವೆಲ್ಲಿ? ನಿನ್ನ ಶಾಂತಿತೀರ್ಥವೆಲ್ಲಿ? ಎಲ್ಲಿ ಸ್ನಾನಮಾಡಿ ಕೊಳೆಯನ್ನು ಕಳೆಯುವೆ? ಯಕ್ಷರು ಪೂಜಿಸುವ ಹೇ ಸಂಯತ, ಹೇಳು. ನಿನ್ನಿಂದ ನಾವು ತಿಳಿಯಲು ಬಯಸುವೆವು." (45)

"ಧರ್ಮವು ಕೊಳ. ಬ್ರಹ್ಮವು ಅನಾವಿಲವೂ ಆತ್ಮಪ್ರಸನ್ನಲೇಶ್ಯವೂ ಆದ ಶಾಂತಿತೀರ್ಥ. ಅದರಲ್ಲಿ ಸ್ನಾನಮಾಡಿ, ವಿಮಲನಾಗಿ, ವಿಶುದ್ಧ ನಾಗಿ, ಚೆನ್ನಾಗಿ ಶೀತಿಭೂತನಾಗಿ ದೋಷವನ್ನು ಕಳೆಯುತ್ತೇನೆ. (46)

"ಇದು ಕುಶಲರು ಕಂಡುಕೊಂಡ ಸ್ನಾನ; ಋಷಿಗಳು ಕೀರ್ತಿಸಿದ ಮಹಾಸ್ನಾನ. ಅಲ್ಲಿ ಮಿಂದು, ವಿಮಲರಾಗಿ, ವಿಶುದ್ಧರಾಗಿ, ಮಹರ್ಷಿ ಗಳು ಉತ್ತಮವಾದ ಸ್ಥಾನವನ್ನು ಪಡೆಯುವರು." (47)

ಎಂದು ಹೇಳುತ್ತೇನೆ.

---

1. ಹವಿಸ್ಸು ಸುರಿಯುವ ಸೌಟು. 2. ಬೆಂಕಿಗೆ ಹಾಕುವ ಬೆರಣಿ.

## ೯. ಜಯಘೋಷ

('ಯಜ್ಞೀಯ' ಎಂಬ ಇಪ್ಪತ್ತೈದನೆಯ ಅಧ್ಯಯನ.)

ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಮಹಾಯಶನಾದ ಜಯಘೋಷನೆಂಬ ವಿಪ್ರನಿದ್ದನು. ಅವನು ಯಮ (ರೂಪವಾದ) ಯಜ್ಞಗಳನ್ನು ಮಾಡುತ್ತಿದ್ದನು. (1)

ಇಂದ್ರಿಯಗ್ರಾಮಗಳನ್ನು ನಿಗ್ರಹಿಸಿ ಮಾರ್ಗಗಾಮಿಯಾದ ಆ ಮಹಾಮುನಿಯು ಗ್ರಾಮದಿಂದ ಗ್ರಾಮಕ್ಕೆ ತಿರುಗುತ್ತ ವಾರಾಣಸಿಪುರಿಯನ್ನು ಸಾರಿದನು. (2)

ವಾರಾಣಸಿಯ ಹೊರಗೆ ಮನೋರಮವಾದ ಉದ್ಯಾನದಲ್ಲಿ ತಂಗಿ, ವಾಸಿಸಿ ಮಲಗುವುದಕ್ಕೆ ಸರಿಯಾದ ಕಡೆ ಬೇಡುಬಿಟ್ಟನು. (3)

ಅದೇ ಕಾಲದಲ್ಲಿ, ಆ ಪುರಿಯಲ್ಲಿ, ವಿಜಯಘೋಷನೆಂಬ ವೇದವಿದನಾದ ಬ್ರಾಹ್ಮಣನು ಯಜ್ಞಮಾಡಿದನು. (4)

ಆ ಮನೆಯಿಲ್ಲದವನು ಒಂದು ಮಾಸದ ಪಾರಣೆಯ ಕೊನೆಗೆ ಭಿಕ್ಷೆಗಾಗಿ ವಿಜಯಘೋಷನ ಯಜ್ಞದ ಬಳಿಸಾರಿದನು. (5)

ಬಳಿಸಾರುವ ಆ ಶಾಂತನನ್ನು ಯಾಜಕನು ತಡೆದನು: "ನಿನಗೆ ಭಿಕ್ಷೆ ಕೊಡುವುದಿಲ್ಲ, ಭಿಕ್ಷು. ಬೇರೆ ಕಡೆ ಬೇಡು. (6)

"ವೇದವಿದರಾದ ವಿಪ್ರರಿಗೆ, ಯಜ್ಞಾರ್ಥಿಗಳಾದ ದ್ವಿಜರಿಗೆ, ಜ್ಯೋತಿಷಾಂಗವಿದರಿಗೆ, ಧರ್ಮದಲ್ಲಿ ಪಾರಗತರಾದವರಿಗೆ, (7)

"ಇತರರನ್ನೂ ತಮ್ಮನ್ನೂ ಉದ್ಧರಿಸಲು ಸಮರ್ಥರಾದವರಿಗೆ,— ಅವರಿಗೆ ಈ ಅನ್ನವನ್ನೂ ಸರ್ವ ಕಾಮಿತಗಳನ್ನೂ ಕೊಡತಕ್ಕುದು, ಭಿಕ್ಷು." (8)

ಅಲ್ಲಿ ಯಾಜಕನಿಂದ ತಡೆಯಲ್ಪಟ್ಟ ಆ ಮಹಾಮುನಿಯು, ಉತ್ತಮಾರ್ಥವನ್ನು ಹುಡುಕುವವನು, ರೋಷಗೊಳ್ಳಲಿಲ್ಲ, ಸಂತೋಷಗೊಳ್ಳಲಿಲ್ಲ. (9)

ಅನ್ನಕ್ಕಾಗಿ ಅಲ್ಲ, ಪಾನಕ್ಕಾಗಿ ಅಲ್ಲ, ಬೇರಾವುದಕ್ಕೂ ಅಲ್ಲ; ಅವರ ವಿಮೋಚನೆಗೋಸ್ಕರ ಈ ಮಾತು ಹೇಳಿದನು: (10)

"ವೇದದ ಮುಖ[1]ವನ್ನಾಗಲಿ, ಯಜ್ಞಗಳ ಮುಖವನ್ನಾಗಲಿ, ನಕ್ಷತ್ರಗಳ ಮುಖವಾವುದೆಂಬುದನ್ನಾಗಲಿ, ಧರ್ಮಗಳ ಮುಖವಾವುದೆಂಬುದನ್ನಾಗಲಿ ನೀವು ಅರಿಯಿರಿ. (11)

"ಇತರರನ್ನೂ ತಮ್ಮನ್ನೂ ಉದ್ಧರಿಸಲು ಸಮರ್ಥರಾದವರನ್ನೂ ನೀವು ತಿಳಿಯಿರಿ. ತಿಳಿದಿದ್ದರೆ, ಹೇಳಿರಿ." (12)

ಆಗ ದ್ವಿಜನು ಆ ಆಕ್ಷೇಪದಿಂದ ಬಿಡಿಸಿಕೊಳ್ಳಲು ಆರದೆ, ಪರಿಸೆಯೊಡನೆ ಕೈಮುಗಿದು, ಆ ಮಹಾಮುನಿಯನ್ನು ಕೇಳಿದನು: (13)

"ವೇದಗಳ ಮುಖವನ್ನು ಹೇಳು. ಯಜ್ಞಗಳ ಮುಖವಾವುದು ಹೇಳು. ನಕ್ಷತ್ರಗಳ ಮುಖವನ್ನು ಹೇಳು. ಧರ್ಮಗಳ ಮುಖವಾವುದು ಹೇಳು. (14)

"ಇತರರನ್ನೂ ತಮ್ಮನ್ನೂ ಉದ್ಧರಿಸಲು ಸಮರ್ಥರಾದವರನ್ನು ತಿಳಿಸು. ಈ ನನ್ನ ಸರ್ವ ಸಂಶಯಗಳನ್ನೂ ಹೇಳಬೇಕೆಂದು ಕೇಳುತ್ತೇನೆ, ಸಾಧು." (15)

"ಅಗ್ನಿಹೋತ್ರವು ವೇದಗಳ ಮುಖ. ಯಜ್ಞದ ಅರ್ಥ[2]ವು ಯಜ್ಞಗಳ ಮುಖ. ನಕ್ಷತ್ರಗಳ ಮುಖ ಚಂದ್ರ. ಧರ್ಮಗಳಲ್ಲಿ ಕಾಶ್ಯಪನದು ಮುಖ. (16)

"ಗ್ರಹ ಮೊದಲಾದವುಗಳು ಚಂದ್ರನನ್ನು ಹೇಗೋ ಹಾಗೆ ಮನೋಹರರು ಉತ್ತಮನಿಗೆ ಕೈಮುಗಿದು ವಂದಿಸಿ ನಮಸ್ಕರಿಸುವರು. (17)

"ವಿದ್ಯೆಯೇ ತಮ್ಮ ಬ್ರಾಹ್ಮಣಸಂಪತ್ತಾದ ಅಜ್ಞಾನಿಗಳು, ಯಜ್ಞ ಬಲ್ಲವರಂತೆ ನಟಿಸುವರು; ಬೂದಿಮುಚ್ಚಿದ ಬೆಂಕಿಯಂತೆ ಸ್ವಾಧ್ಯಾಯ ತಪಸ್ಸುಗಳಿಂದ ಮುಚ್ಚಿಕೊಂಡವರು. (18)

"ಲೋಕದಲ್ಲಿ ಬ್ರಾಹ್ಮಣನೆನಿಸಿಕೊಂಡವನನ್ನು, ಅಗ್ನಿಯಂತೆ ಪೂಜಿತನಾದವನನ್ನು, ಬಲ್ಲವರು (ಬ್ರಾಹ್ಮಣನೆಂದು) ಕಂಡವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (19)

"(ಸಂಘಕ್ಕೆ) ಬಂದ ಮೇಲೆ ಸ್ವಜನರಿಲ್ಲದವನನ್ನು, ಪರಿವ್ರಜಿಸಿ ಶೋಕಪಡದವನನ್ನು, ಆರ್ಯರ ವಚನದಲ್ಲಿ ರಮಿಸುವವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (20)

---

1. ಮುಖ್ಯವಾದುದು. 2. ಸತ್ಯ, ತಪಸ್ಸು, ತೃಪ್ತಿ, ಕ್ಷಮೆ, ಆರ್ಜವ, ಮಾರ್ದವ, ಶ್ರದ್ಧೆ, ಬ್ರಹ್ಮಚರ್ಯ, ಅಹಿಂಸೆ ಮತ್ತು ಸಂವರ.

"ಬೆಂಕಿಯಲ್ಲಿ ಕೊಳೆ ಕಳೆದುಕೊಂಡ ಪುಟವಿಕ್ಕಿದ ಚಿನ್ನದಂತಹವನನ್ನು, ರಾಗ ದ್ವೇಷ ಭಯಗಳು ಮೀರಿದವನನ್ನು ನಾವು ಬ್ರಾಹ್ಮಣನೆನ್ನು ತ್ತೇವೆ. (21)

"ಕೃಶನಾಗಿ ದಾಂತನಾದ ತಪಸ್ವಿಯನ್ನು, ಮಾಂಸ ರಕ್ತಗಳು ಕಡಿಮೆಮಾಡುವವನನ್ನು, ಸುವ್ರತನಾಗಿ ನಿರ್ವಾಣ ಪಡೆದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (22)

"ತ್ರಸಪ್ರಾಣಿಗಳನ್ನೂ ಸ್ಥಾವರಗಳನ್ನೂ ಚೆನ್ನಾಗಿ ತಿಳಿದು, ಮೂರು[1] ವಿಧಗಳಿಂದಲೂ ಹಿಂಸೆಮಾಡದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (23)

"ಕ್ರೋಧದಿಂದಾಗಲಿ, ಹಾಸ್ಯದಿಂದಾಗಲಿ, ಲೋಭದಿಂದಾಗಲಿ, ಭಯ ದಿಂದಾಗಲಿ ಸುಳ್ಳು ಹೇಳದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (24)

"ಚಿತ್ತವಂತವಾಗಿರಲಿ, ಚಿತ್ತವಿಲ್ಲದುದಾಗಿರಲಿ, ಅಲ್ಪವಾದುದಾಗಲಿ, ಮಹತ್ತಾದುದಾಗಲಿ—ಕೊಡದುದನ್ನು ಕೊಳ್ಳದವನನ್ನು ನಾವು ಬ್ರಾಹ್ಮಣ ನೆನ್ನುತ್ತೇವೆ. (25)

"ದೇವ ಮಾನುಷ ತಿರ್ಯಕ್ಕುಗಳಲ್ಲಿ ಮೈಥುನವನ್ನು ಮನಸ್ಸು ಮಾತು ಮೈಗಳಿಂದಲೂ ಆಚರಿಸದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (26)

"ಜಲದಲ್ಲಿ ಹುಟ್ಟಿದ ಪದ್ಮವು ನೀರನ್ನು ಅಂಟಿಸಿಕೊಳ್ಳದ ಹಾಗೆ ಕಾಮಗಳನ್ನು ಅಂಟಿಸಿಕೊಳ್ಳದವನನ್ನು ನಾವು ಬ್ರಾಹ್ಮಣನೆನ್ನು ತ್ತೇವೆ. (27)

"ಲೋಲುಪ್ತಿಯಿಲ್ಲದೆ, ಏಕಾಂತದಲ್ಲಿ ಬದುಕಿ, ಮನೆಮಾರುಗಳಿಲ್ಲದೆ, ಗೃಹಸ್ಥರೊಡನೆ ಸೇರದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (28)

"ಪೂರ್ವ ಸಂಯೋಗಗಳನ್ನೂ ಜ್ಞಾತಿ ಬಾಂಧವರ ಬಳಗವನ್ನೂ ಬಿಟ್ಟು, ಭೋಗಗಳಲ್ಲಿ ಸಿಕ್ಕದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (29)

"ಪಶುಗಳನ್ನು ಬಂಧಿಸುವುದೂ ಸರ್ವವೇದಗಳೂ ಇಷ್ಟಗಳೂ ಪಾಪ ಕರ್ಮಗಳು. ಅವು ದುಶ್ಶೀಲನನ್ನು ಕಾಪಾಡವು. ಕರ್ಮಗಳು ಬಲವಂತ ವಾದವು. (30)

"ಮುಂಡನದಿಂದ ಶ್ರಮಣನಲ್ಲ. ಓಂಕಾರದಿಂದ ಬ್ರಾಹ್ಮಣನಲ್ಲ. ಅರಣ್ಯವಾಸದಿಂದ ಮುನಿಯಲ್ಲ. ಕುಶಚೀರದಿಂದ ತಾಪಸನಲ್ಲ. (31)

"ಸಮತೆಯಿಂದ ಶ್ರಮಣನಾಗುವನು; ಬ್ರಹ್ಮಚರ್ಯೆಯಿಂದ ಬ್ರಾಹ್ಮಣ. ಜ್ಞಾನದಿಂದ ಮುನಿಯಾಗುವನು; ತಪಸ್ಸಿನಿಂದ ತಾಪಸನಾಗುವನು. (32)

1. ಮೈ, ಮಾತು, ಮನಸ್ಸು.

"ಕರ್ಮದಿಂದ ಬ್ರಾಹ್ಮಣನಾಗುವನು. ಕರ್ಮದಿಂದ ಕ್ಷತ್ರಿಯನಾಗುವನು. ವೈಶ್ಯನಾಗುವನು ಕರ್ಮದಿಂದ. ಕರ್ಮದಿಂದಾಗುವನು ಶೂದ್ರ. (33)

"ಯಾವುದರಿಂದ ಸ್ನಾತಕ[1]ನಾಗುವನೋ ಆ ಇವುಗಳನ್ನು ಬುದ್ಧನು ಪ್ರಕಟಗೊಳಿಸಿದನು. ಸರ್ವಕರ್ಮಗಳಿಂದ ವಿಮುಕ್ತನಾದವನನ್ನು ನಾವು ಬ್ರಾಹ್ಮಣನೆನ್ನುತ್ತೇವೆ. (34)

"ಈ ಗುಣಗಳನ್ನು ಹೊಂದಿ ದ್ವಿಜೋತ್ತಮರಾದವರು ಇತರರನ್ನೂ ತಮ್ಮನ್ನೂ ಉದ್ಧರಿಸಲು ಸಮರ್ಥರಾದವರು." (35)

ಹೀಗೆ ತನ್ನ ಸಂಶಯ ಹರಿಯಲು ಬ್ರಾಹ್ಮಣ ವಿಜಯಘೋಷನು ಜಯಘೋಷ ಮಹಾಮುನಿಯ ಮಾತು ಒಪ್ಪಿದನು. (36)

ವಿಜಯಘೋಷನು ತುಷ್ಟನಾಗಿ, ಕೈಮುಗಿದು ಹೀಗೆಂದನು: "ನೀನು ಬ್ರಾಹ್ಮಣತ್ವವನ್ನು ಯಥಾಭೂತವಾಗಿ ನನಗೆ ಚೆನ್ನಾಗಿ ಕಾಣಿಸಿರುವೆ. (37)

"ನೀನು ಯಜ್ಞಗಳ ಯಷ್ಟಾರನು. ನೀನು ವೇದವಿದರಲ್ಲಿ ವೇತ್ತನು. ನೀನು ಜ್ಯೋತಿಷಾಂಗವಿದನು. ನೀನು ಧರ್ಮಗಳಲ್ಲಿ ಪಾರಂಗತನು. (38)

"ಪರರನ್ನೂ ನಿನ್ನನ್ನೂ ಉದ್ಧರಿಸಲು ಸಮರ್ಥನು ನೀನು. ಭಿಕ್ಷೂತ್ತಮ, ನಮ್ಮ ಭಿಕ್ಷೆಯನ್ನು ಒಪ್ಪಿ ಅನುಗ್ರಹಿಸು." (39)

"ನನಗೆ ಭಿಕ್ಷೆ ಬೇಕಿಲ್ಲ. ಬೇಗ ನಿಷ್ಕ್ರಮಿಸು, ದ್ವಿಜ. ಭಯಾವರ್ತದ ಘೋರವಾದ ಸಂಸಾರಸಾಗರದಲ್ಲಿ ಭ್ರಮಿಸಬೇಡ. (40)

"ಭೋಗಗಳಲ್ಲಿ ಉಪಲೇಪವಿದೆ. ಭೋಗವಿಲ್ಲದವನಿಗೆ ಉಪಲೇಪವಿಲ್ಲ. ಭೋಗಿಯು ಸಂಸಾರದಲ್ಲಿ ಭ್ರಮಿಸುವನು. ಭೋಗಿಯಲ್ಲದವನು ವಿಮುಕ್ತನಾಗುವನು. (41)

"ಒದ್ದೆಯಾದ ಮತ್ತು ಒಣಗಿದ ಎರಡು ಮಣ್ಣುಗುಂಡುಗಳನ್ನು ಕೊಂಡು, ಎರಡನ್ನೂ ಗೋಡೆಗೆ ಎಸೆದರೆ, ಒದ್ದೆಯಾದುದು ಅಲ್ಲಿ ಅಂಟಕೊಳ್ಳುವುದು. (42)

"ಹೀಗೆಯೇ ದುರ್ಮೇಧರು, ಕಾಮಲಾಲಸೆಯುಳ್ಳ ಜನರು, ಅಂಟಕೊಳ್ಳುವರು. ವಿರಕ್ತರಾದವರು, ಒಣಗಿದ ಗುಂಡಿನಂತೆ, ಅಂಟಕೊಳ್ಳುವುದಿಲ್ಲ." (43)

1. ವಿದ್ಯಾಚರಣಗಳನ್ನು ಮುಗಿಸಿ ಮುನಿಯಾದವನು.

ವಿಜಯಘೋಷನು, ಅನುತ್ತರವಾದ ಧರ್ಮವನ್ನು ಅನಾಗಾರ್ಯನಾದ ಜಯಘೋಷನಿಂದ ಕೇಳಿ, ನಿಷ್ಕ್ರಮಿಸಿದನು. (44)

ಪೂರ್ವ ಕರ್ಮಗಳನ್ನು ಸಂಯಮ ತಪಸ್ಸುಗಳಿಂದ ಕ್ಷಯಿಸಿ, ಜಯಘೋಷ ವಿಜಯಘೋಷರು ಅನುತ್ತರವಾದ ಸಿದ್ಧಿಯನ್ನು ಪಡೆದರು. (45)

ಎಂದು ಹೇಳುತ್ತೇನೆ.

## ೧೦. ಕೇಶಿ ಗೌತಮ ಸಂವಾದ

('ಕೇಶಿ ಗೌತಮೀಯ' ಎಂಬ ಇಪ್ಪತ್ತಮೂರನೆಯ ಅಧ್ಯಯನ.)

ಪಾರ್ಶ್ವ[1]ನೆಂಬ ಜಿನನಿದ್ದನು. ಆತನು ಅರ್ಹನು, ಲೋಕಪೂಜ್ಯನು, ಸಂಬುದ್ಧಾತ್ಮನು, ಸರ್ವಜ್ಞನು, ಧರ್ಮತೀರ್ಥಕರನು, ಜಿನನು. (1)

ಆ ಲೋಕಪ್ರದೀಪನಿಗೆ ಕುಮಾರಶ್ರಮಣನಾದ ಕೇಶಿಯೆಂಬ ಮಹಾಯಶಸ್ವಿನ ಶಿಷ್ಯ[2]ನಿದ್ದನು. ಆತನು ವಿದ್ಯಾಚರಣಗಳಲ್ಲಿ ಪಾರಂಗತನು. (2)

ಅವಧಿ ಮತ್ತು ಶ್ರುತ ಜ್ಞಾನಗಳಿಂದ ಬುದ್ಧನಾದ ಅವನು ತನ್ನ ಶಿಷ್ಯರ ಸಮೂಹದೊಡನೆ ಗ್ರಾಮದಿಂದ ಗ್ರಾಮಕ್ಕೆ ತಿರುಗುತ್ತ ಶ್ರಾವಸ್ತೀ ನಗರಿಗೆ ಬಂದನು. (3)

ಆ ನಗರಮಂಡಲದಲ್ಲಿ ತಿಂದುಕವೆಂಬ ಉದ್ಯಾನ. ಅಲ್ಲಿ, ಮಲಗಿ ಕುಳ್ಳಿರಲು ತಕ್ಕ ಸ್ಥಳದಲ್ಲಿ ಅವನು ವಾಸಮಾಡಿದನು. (4)

ಅದೇ ಕಾಲದಲ್ಲಿ, ಭಗವಾನ್ ವರ್ಧಮಾನನೆಂಬ ಸರ್ವ ಲೋಕದಲ್ಲಿ ವಿಶ್ರುತನಾದ ಧರ್ಮತೀರ್ಥಕರನು, ಜಿನನು, ಇದ್ದನು. (5)

ಆ ಲೋಕಪ್ರದೀಪನಿಗೆ ಭಗವಾನ್ ಗೌತಮನೆಂಬ ಮಹಾಯಶಸ್ವಿನ ಶಿಷ್ಯನಿದ್ದನು. ಆತನು ವಿದ್ಯಾಚರಣಗಳಲ್ಲಿ ಪಾರಂಗತನು. (6)

ಆತನು ದ್ವಾದಶಾಂಗವನ್ನು ತಿಳಿದವನು, ಬುದ್ಧನು; ತನ್ನ ಶಿಷ್ಯ ಸಮೂಹದೊಡನೆ ಗ್ರಾಮದಿಂದ ಗ್ರಾಮಕ್ಕೆ ತಿರುಗುತ್ತ ಆತನೂ ಶ್ರಾವಸ್ತಿಗೆ ಬಂದನು. (7)

ಆ ನಗರಮಂಡಲದಲ್ಲಿ ಕೋಷ್ಟಕವೆಂಬ ಉದ್ಯಾನ. ಅಲ್ಲಿ, ಮಲಗಿ ಕುಳ್ಳಿರಲು ತಕ್ಕ ಸ್ಥಳದಲ್ಲಿ ಅವನು ವಾಸಮಾಡಿದನು. (8)

ಕುಮಾರಶ್ರಮಣನಾದ ಕೇಶಿಯೂ ಮಹಾಯಶನಾದ ಗೌತಮನೂ, ಇಬ್ಬರೂ ತಮ್ಮನ್ನು ಕಾಪಾಡಿಕೊಂಡು ಸುಸಮಾಹಿತರಾಗಿ ಅಲ್ಲಿ ವಿಹರಿಸುತ್ತಿದ್ದರು. (9)

---

1. ಇಪ್ಪತ್ತಮೂರನೆಯ ತೀರ್ಥಂಕರ. ಮಹಾವೀರನಿಗೆ 250 ವರ್ಷ ಮೊದಲಿನವನು.

2. ಪರಂಪರಾಶಿಷ್ಯ.

ಅವರಿಬ್ಬರ ಶಿಷ್ಯಸಂಘಕ್ಕೆ, ಸಂಯಮಿಗಳಾಗಿ ತಪಸ್ವಿಗಳಾಗಿ ಗುಣವಂತರಾಗಿ ಆತ್ಮವನ್ನು ರಕ್ಷಿಸುತ್ತಿದ್ದವರಿಗೆ, ಆಗ ಚಿಂತೆ ಹುಟ್ಟಿತು: (10)

"ನಮ್ಮ ಧರ್ಮ ಎಂತಹದು? ಆ ಧರ್ಮ ಎಂತಹದು? ಆಚಾರ ಧರ್ಮಗಳಲ್ಲಿ ನಮ್ಮದು ಎಂತಹದು? ಅದು ಎಂತಹದು? (11)

"ಮಹಾಮುನಿಯಾದ ಪಾರ್ಶ್ವನ ಧರ್ಮವು ನಾಲ್ಕು ಯಾಮ[1]ಗಳದು. ವರ್ಧಮಾನನಿಂದ ದೇಶಿತವಾದುದು ಐದು ಶಿಕ್ಷೆ[2]ಗಳದು. (12)

"ಈ ಧರ್ಮವು ಅಚೇಲಕತ್ವದ್ದು[3]. ಅದು ಸಾಂತರೋತ್ತರವಾದುದು.[4] ಒಂದೇ ಪ್ರಪತ್ತಿಗೆ ಕಾರ್ಯಮಾಡುವಾಗ ಈ ವಿಶೇಷಕ್ಕೆ ಕಾರಣವೇನು?" (13)

ಆಗ ತಮ್ಮ ಶಿಷ್ಯರ ವಿತರ್ಕಗಳನ್ನು ತಿಳಿದು, ಕೇಶಿ ಗೌತಮರಿಬ್ಬರೂ ಒಬ್ಬರನ್ನೊಬ್ಬರು ಕಾಣಲು ಮನಸ್ಸುಮಾಡಿದರು. (14)

ತಕ್ಕುದನ್ನು ತಿಳಿದವನಾದ ಗೌತಮನು ಜ್ಯೇಷ್ಠ ಕುಲಕ್ಕೆ ಸಲ್ಲಬೇಕಾದುದನ್ನು ನೆನೆದು ತನ್ನ ಶಿಷ್ಯಸಂಕುಲದೊಡನೆ ತಿಂದುಕವನಕ್ಕೆ ಹೋದನು. (15)

ಕುಮಾರಶ್ರಮಣನಾದ ಕೇಶಿಯು ಗೌತಮನು ಬರುವುದನ್ನು ಕಂಡು, ಯೋಗ್ಯವಾದ ರೀತಿಯಲ್ಲಿ ಅವನನ್ನು ಬರಮಾಡಿಕೊಂಡನು. (16)

ಗೌತಮನು ಕುಳಿತುಕೊಳ್ಳುವುದಕ್ಕಾಗಿ ನಾಲ್ಕು ತೆರದ ಅನಿಂದಿತವಾದ ಹುಲ್ಲನ್ನೂ ಐದನೆಯದಾಗಿ ಕುಶತೃಣಗಳನ್ನೂ ಬೇಗನೆ ಒಪ್ಪಿಸಿದನು. (17)

ಕುಮಾರಶ್ರಮಣನಾದ ಕೇಶಿಯೂ ಮಹಾಯಶನಾದ ಗೌತಮನೂ ಇಬ್ಬರೂ ಒಟ್ಟಿಗೆ ಕುಳಿತು, ಚಂದ್ರಸೂರ್ಯರ ಸಮಪ್ರಭೆಯಿಂದ ಶೋಭಿಸಿದರು. (18)

ಅಲ್ಲಿ ಅನೇಕ ಪಾಷಂಡರು ಕೌತುಕದಿಂದ ಬಂದು ನೆರೆದರು. ಅನೇಕ ಸಹಸ್ರಾರು ಗೃಹಸ್ಥರೂ ಬಂದು ಕೂಡಿದರು. (19)

ದೇವ ದಾನವ ಗಂಧರ್ವರೂ ಯಕ್ಷ ರಾಕ್ಷಸ ಕಿನ್ನರರೂ ಅದೃಶ್ಯರಾದ ಭೂತಗಳೂ ಅಲ್ಲಿ ಕೂಡಿದರು. (20)

---

1. ಅಹಿಂಸೆ, ಅಸ್ತೇಯ, ಸತ್ಯ, ಅಪರಿಗ್ರಹ. (ಆ ಕಾಲದಲ್ಲಿ ಬ್ರಹ್ಮಚರ್ಯವು ಅಪರಿಗ್ರಹವಲ್ಲಿಯೇ ಕೂಡಿಕೊಂಡಿತ್ತು.) 2. ಮೇಲಿನ ನಾಲ್ಕು, ಮತ್ತು ಬ್ರಹ್ಮಚರ್ಯ. 3. ಬಟ್ಟೆ ಇಲ್ಲದೆ ನಗ್ನವಾದುದು, (ದಿಗಂಬರ.) 4. ಒಳಗಣ ಮತ್ತು ಮೇಲಿನ ಬಟ್ಟೆಗಳನ್ನು ಒಪ್ಪತಕ್ಕದ್ದು, (ಶ್ವೇತಾಂಬರ).

"ನಿನ್ನನ್ನು ಕೇಳಬೇಕು, ಮಹಾಭಾಗ" ಎಂದು ಕೇಶಿಯು ಗೌತಮನಿಗೆಂದನು. ಕೇಶಿಯು ಹೀಗೆಂದುದಕ್ಕೆ ಗೌತಮನು ಹೀಗೆಂದನು: (21)

"ಬೇಕಾದುದು ಕೇಳು, ಭದಂತ!" ಎಂದು ಕೇಶಿಗೆ ಗೌತಮನು ಹೇಳಿದನು. ಹೀಗೆ ಅನುಜ್ಞೆಯಾಗಲು, ಕೇಶಿಯು ಗೌತಮನಿಗೆ ಹೀಗೆಂದನು: (22)

"ಮಹಾಮುನಿಯಾದ ಪಾರ್ಶ್ವನ ಧರ್ಮವು ನಾಲ್ಕು ಯಾಮಗಳದ್ದು. ವರ್ಧಮಾನನಿಂದ ದೇಶಿತವಾದುದು ಐದು ಶಿಕ್ಷೆಗಳದು. (23)

"ಒಂದೇ ಪ್ರಪತ್ತಿಗೆ ಕಾರ್ಯಮಾಡುವಾಗ ಈ ವಿಶೇಷಕ್ಕೆ ಕಾರಣವೇನು? ಹೇ ಮೇಧಾವಿ, ಈ ಎರಡು ತೆರನಾದ ಧರ್ಮಗಳಲ್ಲಿ ನಿನಗೆ ಸಂದೇಹವಿಲ್ಲವೆ?" (24)

ಕೇಶಿಯು ಹೀಗೆಂದುದಕ್ಕೆ ಗೌತಮನು ಹೀಗೆಂದನು: "ಧರ್ಮತತ್ತ್ವವನ್ನೂ ತತ್ತ್ವವಿನಿಶ್ಚಯವನ್ನೂ ಪ್ರಜ್ಞೆಯು ಸಮೀಕ್ಷಿಸುವುದು. (25)

"ಮೊದಲಿನವರು[1] ಋಜುವಾಗಿ ಜಡರಾಗಿದ್ದರು. ಕಡೆಯವರು[2] ವಕ್ರವಾಗಿ ಜಡರಾಗಿದ್ದರು. ಮಧ್ಯದವರು ಋಜುವಾಗಿ ಪ್ರಜ್ಞೆಯುಳ್ಳವರಾಗಿದ್ದರು. ಅದರಿಂದ ಧರ್ಮವು ಎರಡು ತೆರನಾಯಿತು. (26)

"ಮೊದಲಿನವರಿಗೆ ಧರ್ಮ ತಿಳಿಯುವುದು ಕಷ್ಟವಾಗಿತ್ತು. ಕಡೆಯವರಿಗೆ ಧರ್ಮವನ್ನು ಪಾಲಿಸುವುದು ಕಷ್ಟವಾಗಿತ್ತು. ನಡುವಣವರಿಗೆ ತಿಳಿಯುವುದೂ ಪಾಲಿಸುವುದೂ ಸುಲಭವಾಗಿತ್ತು." (27)

"ಸಾಧು, ಗೌತಮ. ನೀನು ಪ್ರಾಜ್ಞ. ನಿನ್ನಿಂದ ನನ್ನ ಸಂಶಯ ಹರಿಯಿತು. ಇನ್ನೊಂದು ಸಂಶಯವಿದೆ. ಅದನ್ನು ನನಗೆ ತಿಳಿಸಬೇಕು, ಗೌತಮ. (28)

"ವರ್ಧಮಾನನಿಂದ ದೇಶಿಸಲ್ಪಟ್ಟ ಧರ್ಮವು ಅಚೇಲಕತ್ವದ್ದು. ಮಹಾಯಶನಾದ ಪಾರ್ಶ್ವನದು ಸಾಂತರೋತ್ತರವಾದುದು. (29)

"ಒಂದೇ ಪ್ರಪತ್ತಿಗೆ ಕಾರ್ಯಮಾಡುವಾಗ ಈ ವಿಶೇಷಕ್ಕೆ ಕಾರಣವೇನು? ಹೇ ಮೇಧಾವಿ, ಈ ಎರಡು ತೆರನಾದ ಧರ್ಮಗಳಲ್ಲಿ ನಿನಗೆ ಸಂದೇಹವಿಲ್ಲವೆ?" (30)

---

1. ಮೊದಲ ತೀರ್ಥಂಕರರ ಅನುಯಾಯಿಗಳು. 2. ಕಡೆಯ ತೀರ್ಥಂಕರರ ಅನುಯಾಯಿಗಳು.

ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: "(ತೀರ್ಥಂಕರರು ತಮ್ಮ) ವಿಶೇಷ ಜ್ಞಾನದಿಂದ ಬೇಕಾದ ಧರ್ಮಸಾಧನವನ್ನು ನಿಶ್ಚಯಿಸಿರುವರು. (31)

"(ಈ) ನಾನಾ ವಿಧವಾದ ವಿಕಲ್ಪನಗಳು ಜನಗಳು ಗುರುತಿಸುವುದಕ್ಕಾಗಿ ಆದುವು. ಇವುಗಳ ಪ್ರಯೋಜನವು ಯಾತ್ರಾರ್ಥದಲ್ಲಿ ಮತ್ತು ಗ್ರಹಣಾರ್ಥದಲ್ಲಿ. (32)

"ಜ್ಞಾನ, ದರ್ಶನ, ಚಾರಿತ್ರಗಳು (ಮಾತ್ರ) ಮೋಕ್ಷಕ್ಕೆ ನಿಶ್ಚಯವಾದ ಸಾಧನಗಳೆಂದು ಅಭಿಪ್ರಾಯಪಡುವರು." (33)

"ಸಾಧು, ಗೌತಮ, ನೀನು ಪ್ರಾಜ್ಞ. ನಿನ್ನಿಂದ ನನ್ನ ಸಂಶಯ ಹರಿಯಿತು. ಇನ್ನೊಂದು ಸಂಶಯವಿದೆ. ಅದನ್ನು ನನಗೆ ತಿಳಿಸಬೇಕು, ಗೌತಮ. (34)

"ಅನೇಕ ಸಹಸ್ರಗಳ ನಡುವೆ ನಿಂತಿರುವೆ, ಗೌತಮ. ಅವು ನಿನಗೆ ಎದುರು ಬೀಳುವುವು. ನೀನು ಅವನ್ನು ಹೇಗೆ ಜಯಿಸಿರುವೆ?" (35)

"ಒಂದನ್ನು ಗೆದ್ದರೆ ಐದನ್ನು ಗೆದ್ದಂತೆ. ಐದು ಗೆದ್ದರೆ ಹತ್ತರ ಜಯವಾಯಿತು. ಹತ್ತನ್ನು ಜಯಿಸಿ, ಸರ್ವ ಶತ್ರುಗಳನ್ನೂ ಜಯಿಸುತ್ತೇನೆ." (36)

"ಯಾರನ್ನು ಶತ್ರುವೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಆಗ ಕೇಶಿ ಹೀಗೆಂದುದಕ್ಕೆ ಗೌತಮನು ಹೀಗೆಂದನು: (37)

"ಅಜಿತವಾದ ಒಂದು ಶತ್ರು ಆತ್ಮ. ಕಷಾಯಗಳು (ನಾಲ್ಕು ಕೂಡಿ ಐದು); ಇಂದ್ರಿಯಗಳು (ಐದು ಸೇರಿ ಹತ್ತು.) ಇವುಗಳನ್ನು ಒಂದೊಂದಾಗಿ ಗೆದ್ದು, ನಾನು ವಿಹರಿಸುವೆನು, ಮುನಿ." (38)

"ಸಾಧು, ಗೌತಮ, . . . . (ಮೇಲೆ 34ರಂತೆ) . . . . (39)

"ಪಾಶಬದ್ಧರಾದ ಅನೇಕ ಶರೀರಿಗಳು ಲೋಕದಲ್ಲಿ ಕಂಡುಬರುವರು. ನೀನು ಪಾಶಗಳಿಂದ ಮುಕ್ತನಾಗಿ ಹಾಯಾಗಿ ವಿಹರಿಸುವುದು ಹೇಗೆ, ಮುನಿ?" (40)

"ಆ ಸರ್ವ ಪಾಶಗಳನ್ನೂ ಹರಿದು, ಉಪಾಯಗಳಿಂದ ಅವನ್ನು ಹತಮಾಡಿ, ಮುಕ್ತಪಾಶನಾಗಿ ಹಾಯಾಗಿ ವಿಹರಿಸುತ್ತೇನೆ, ಮುನಿ." (41)

"ಯಾವುದನ್ನು ಪಾಶಗಳೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆನ್ನಲು, ಅದಕ್ಕೆ ಗೌತಮನು ಹೀಗೆಂದನು: (42)

"ರಾಗ ದ್ವೇಷ ಮೊದಲಾದವು ತೀವ್ರವಾದ ಪಾಶಗಳು; ಸ್ನೇಹವು ಭಯಂಕರವಾದುದು. ಅವುಗಳನ್ನು ಒಂದೊಂದಾಗಿ ಕತ್ತರಿಸಿ, ಕ್ರಮಕ್ಕೆ ತಕ್ಕಂತೆ ವಿಹರಿಸುತ್ತೇನೆ." (43)

"ಸಾಧು, ಗೌತಮ, . . . . (ಮೇಲೆ 34ರಂತೆ) . . . . (44)

"ಗೌತಮ, ವಿಷದ ಹಣ್ಣು ಬಿಡುವ ಲತೆಯೊಂದು ಹೃದಯದ ನಡುವೆ ಹುಟ್ಟಿ ನಿಂತಿದೆ. ಅದನ್ನು ಹೇಗೆ ಕಿತ್ತುಹಾಕಿರುವೆ?" (45)

"ಆ ಲತೆಯನ್ನು ಸಂಪೂರ್ಣವಾಗಿ ಕತ್ತರಿಸಿ, ಬುಡಸಹಿತ ಕಿತ್ತು, ವಿಷದ ಹಣ್ಣಿಂದ ಮುಕ್ತನಾಗಿ ವಿಹರಿಸುವೆನು." (46)

"ಯಾವುದನ್ನು ಲತೆಯೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆಂದುದಕ್ಕೆ ಗೌತಮನು ಹೀಗೆಂದನು: (47)

"ಭವದ ತೃಷ್ಣೆಯು ಭಯಂಕರವಾದ ಫಲಬಿಡುವ ಭಯಂಕರವಾದ ಲತೆಯು. ಅದನ್ನು ಕ್ರಮಕ್ರಮವಾಗಿ ಕಿತ್ತು ವಿಹರಿಸುವೆನು, ಮಹಾಮುನಿ." (48)

"ಸಾಧು, ಗೌತಮ, . . . . (ಮೇಲೆ 34ರಂತೆ) . . . . (49)

"ಗೌತಮ, ಪ್ರಜ್ವಲಿಸುವ ಘೋರವಾದ ಅಗ್ನಿಗಳು ಶರೀರಿಗಳನ್ನು ದಹಿಸುತ್ತವೆ. ನೀನು ಹೇಗೆ ಅವನ್ನು ಆರಿಸಿರುವೆ?" (50)

"ಮಹಾ ಮೇಘದಿಂದ ಜನಿಸಿದ ನೀರನ್ನು, ಉತ್ತಮವಾದ ಜಲವನ್ನು, ಸದಾ ದೇಹದ ಮೇಲೆ ಚಿಮುಕಿಸುವೆನು. ಹೀಗೆ ಚಿಮುಕಿಸಲು, ಅವು ನನ್ನನ್ನು ದಹಿಸವು." (51)

"ಯಾವುದನ್ನು ಅಗ್ನಿಗಳೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (52)

"ಕಷಾಯಗಳು ಅಗ್ನಿಗಳು. ಶ್ರುತ, ಶೀಲ, ತಪಸ್ಸುಗಳು ಜಲವು. ಶ್ರುತದ ಧಾರೆಯು ಬಿದ್ದು ಶಾಂತವಾಗುವುವು. ಅಡಗಿ, ನನ್ನನ್ನು ದಹಿಸವು."(53)

"ಸಾಧು, ಗೌತಮ, . . . . (ಮೇಲೆ 34ರಂತೆ) . . . . (54)

"ಗೌತಮ, ನಾವು ಏರಿರುವ ಈ ಸಾಹಸಿಕವಾದ, ಭಯಂಕರವಾದ, ಕೆಟ್ಟ ಕುದುರೆಯು ಓಡಿಹೋಗುತ್ತದೆ. ಅದು ನಿನ್ನನ್ನೇಕೆ ಹೊತ್ತುಕೊಂಡು ಹೋಗುವುದಿಲ್ಲ?" (55)

"ಓಡುವ ಅದನ್ನು ಶ್ರುತವೆಂಬ ಹಗ್ಗದಿಂದ ನಿಗ್ರಹಿಸುತ್ತೇನೆ. ಆದ ರಿಂದ ಅದನ್ನು ನನ್ನನ್ನು ಉನ್ಮಾರ್ಗಕ್ಕೆ ಒಯ್ಯದೆ ಮಾರ್ಗದಲ್ಲಿ ಹೋಗು ವುದು." (56)

"ಯಾವುದನ್ನು ಕುದುರೆಯೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (57)

"ಓಡುವ ಸಾಹಸಿಕವಾದ ಭಯಂಕರವಾದ ಕೆಟ್ಟ ಕುದುರೆಯು ಮನಸ್ಸು. ಅದನ್ನು ಕಂಥಕ[1]ದಂತೆ ಧರ್ಮಶಿಕ್ಷೆಗಳಿಂದ ಚೆನ್ನಾಗಿ ನಿಗ್ರಹಿಸು ವೆನು." (58)

"ಸಾಧು, ಗೌತಮ, . . . (ಮೇಲೆ 34ರಂತೆ) . . . (59)

"ಜನರನ್ನು ನಾಶಮಾಡುವ ಕೆಟ್ಟ ಹಾದಿಗಳು ಲೋಕದಲ್ಲಿ ಬಹಳ. ಮಾರ್ಗದಲ್ಲಿ ಹೋಗುವ ನೀನೇಕೆ ಕೆಡುವುದಿಲ್ಲ, ಗೌತಮ?" (60)

"ಮಾರ್ಗದಲ್ಲಿ ಹೋಗುವವರನ್ನೂ ಉನ್ಮಾರ್ಗದಲ್ಲಿ ನಡೆಯುವವ ರನ್ನೂ, ಎಲ್ಲರನ್ನೂ ನಾನು ಬಲ್ಲೆ. ಅದರಿಂದ ನಾನು ತಪ್ಪುವುದಿಲ್ಲ, ಮುನಿ." (61)

"ಯಾವುದನ್ನು ಮಾರ್ಗವೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆಂದುದಕ್ಕೆ ಗೌತಮನು ಹೀಗೆಂದನು: (62)

"ಕುಪ್ರವಚನದವರೂ ಪಾಷಂಡಿಗಳೂ ಸರ್ವರೂ ಉನ್ಮಾರ್ಗದಲ್ಲಿ ನಡೆವವರು. ಜಿನರು ಹೇಳಿದುದು ಸನ್ಮಾರ್ಗ. ಅದೆ ಉತ್ತಮವಾದ ಮಾರ್ಗ." (63)

"ಸಾಧು, ಗೌತಮ, . . . (ಮೇಲೆ 34ರಂತೆ) . . . (64)

"ಮಹಾನೀರಿನ ವೇಗಕ್ಕೆ ಕೊಚ್ಚಿ ಹೋಗುವ ಪ್ರಾಣಿಗಳಿಗೆ ಒಂದು ಶರಣನ್ನು, ಗತಿಯನ್ನು, ನಿಲ್ಲಲು ತಾವನ್ನು, ದ್ವೀಪವನ್ನು ನೀನು ಬಲ್ಲೆಯ, ಮುನಿ?" (65)

"ನೀರಿನ ನಡುವೆ ವಿಶಾಲವಾದ ಒಂದು ಮಹಾದ್ವೀಪವುಂಟು. ಅದನ್ನು ಮಹಾನೀರಿನ ವೇಗವು ತಾಕಲಾರದು." (66)

"ಯಾವುದನ್ನು ದ್ವೀಪವೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿ ದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (67)

1. ಕಾಂಭೋಜದ ಜಾತಿ ಕುದುರೆ.

"ಪ್ರಾಣಿಗಳನ್ನು ಕೊಚ್ಚಿಕೊಂಡು ಹೋಗುವ ಪ್ರವಾಹವು ಮುಪ್ಪು ಸಾವು. ಧರ್ಮವು ದ್ವೀಪ, ನಿಲ್ಲಲು ತಾವು, ಗತಿ, ಉತ್ತಮವಾದ ಶರಣು." (68)

"ಸಾಧು, ಗೌತಮ, . . . (ಮೇಲೆ 34ರಂತೆ) . . . (69)

"ಮಹಾ ಪ್ರವಾಹಗಳ ಸಮುದ್ರದಲ್ಲಿ ನಾವೆ ಓಡುವುದು. ಅದನ್ನು ಏರಿ, ಆಚೆದಡಕ್ಕೆ ಹೇಗೆ ಹೋಗುವೆ, ಗೌತಮ?" (70)

"ಒಡಕು ನಾವೆಯು ಆಚೆ ದಡಕ್ಕೆ ಹೋಗದು. ಒಡಕಿಲ್ಲದ ನಾವೆಯು ಆಚೆ ದಡಕ್ಕೆ ಹೋಗುವುದು." (71)

"ಯಾವುದನ್ನು ನಾವೆಯೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (72)

"ಶರೀರ ನಾವೆ. ಜೀವ ನಾವಿಕ. ಸಂಸಾರವು ಸಮುದ್ರ. ಅದನ್ನು ಮಹರ್ಷಿಗಳು ದಾಟುವರು." (73)

"ಸಾಧು, ಗೌತಮ, . . . (ಮೇಲೆ 34ರಂತೆ) . . . (74)

"ಈ ಘೋರವಾದ ಕಗ್ಗತ್ತಲೆಯಲ್ಲಿ ಅನೇಕ ಪ್ರಾಣಿಗಳು ನಿಂತಿವೆ. ಈ ಸರ್ವಲೋಕದ ಪ್ರಾಣಿಗಳಿಗೆ ಬೆಳಕು ತರುವವರು ಯಾರು?" (75)

"ವಿಮಲನಾದ ಸೂರ್ಯನು ಎದ್ದಿರುವನು, ಸರ್ವಲೋಕವನ್ನೂ ಬೆಳಗುವನು. ಸರ್ವಲೋಕದ ಪ್ರಾಣಿಗಳಿಗೆ ಅವನು ಬೆಳಕು ತರುವನು." (76)

"ಯಾರನ್ನು ಸೂರ್ಯನೆನ್ನುವೆ?" ಎಂದು ಕೇಶಿ ಗೌತಮನನ್ನು ಕೇಳಿದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (77)

"ಸಂಸಾರವನ್ನು ಕ್ಷಯಿಸಿದ ಸರ್ವಜ್ಞನು, ಜಿನಭಾಸ್ಕರನು, ಎದ್ದಿರುವನು. ಅವನು ಸರ್ವಲೋಕದ ಪ್ರಾಣಿಗಳಿಗೆ ಬೆಳಕು ತರುವನು." (78)

"ಸಾಧು, ಗೌತಮ, . . . (ಮೇಲೆ 34ರಂತೆ) . . . (79)

"ಶರೀರ ಮನಸ್ಸುಗಳ ದುಃಖದಿಂದ ಬಾಧೆಪಡುತ್ತಿರುವ ಪ್ರಾಣಿಗಳಿಗೆ ಕ್ಷೇಮವೂ ಶಿವವೂ ಅನಾಬಾಧವೂ ಆದ ಸ್ಥಾನವು ನಿನಗೆ ಗೊತ್ತೆ, ಮುನಿ?" (80)

"ಲೋಕಾಗ್ರುದಲ್ಲಿ ಒಂದು ಧ್ರುವವಾದ ಸ್ಥಾನವುಂಟು; ಅದು ಏರಲು ಕಷ್ಟವಾದುದು. ಅಲ್ಲಿ ಮುಪ್ಪಿಲ್ಲ, ಸಾವಿಲ್ಲ, ವ್ಯಾಧಿ ವೇದನೆಗಳಿಲ್ಲ." (81)

"ಯಾವುದನ್ನು ಸ್ಥಾನವೆನ್ನುವೆ?" ಎಂದು ಕೇಶಿ ಗೌತಮುನನ್ನು ಕೇಳಿದನು. ಕೇಶಿ ಹೀಗೆನ್ನಲು, ಗೌತಮನು ಹೀಗೆಂದನು: (82)

"ಲೋಕಾಗ್ರದಲ್ಲಿರುವ ಅದನ್ನು ನಿರ್ವಾಣವೆಂದು, ಬಾಧೆಯಿಲ್ಲದುದೆಂದು, ಸಿದ್ಧಿಯೆಂದು (ಹೇಳುವರು). ಅದು ಕ್ಷೇಮವು, ಶಿವವು, ಬಾಧೆಯಿಲ್ಲದುದು. ಅಲ್ಲಿಗೆ ಮಹರ್ಷಿಗಳು ನಡೆವರು. (83)

"ಲೋಕಾಗ್ರುದಲ್ಲಿರುವ ಆ ಸ್ಥಾನವು, ಶಾಶ್ವತವಾದ ಆವಾಸವು, ಏರಲು ಕಷ್ಟವಾದುದು. ಭವದ ಹೊಳೆಯನ್ನು ಕಡೆಗಾಣಿಸಿದ ಮುನಿಗಳು ಅದನ್ನು ಪಡೆದು, ಶೋಕಿಸುವುದಿಲ್ಲ." (84)

"ಸಾಧು, ಗೌತಮ, ನೀನು ಪ್ರಾಜ್ಞ. ನಿನ್ನಿಂದ ನನ್ನ ಸಂಶಯ ಹರಿಯಿತು. ಸಂಶಯಗಳನ್ನು ದಾಟದ ನಿನಗೆ, ಸರ್ವ ಸೂತ್ರ[1]ಗಳಿಗೆ ಸಮುದ್ರುದಂತಿರುವ ನಿನಗೆ, ನಮುಸ್ಕಾರ." (85)

ಹೀಗೆ ಸಂಶಯಗಳು ಭಿನ್ನವಾಗಲು, ಘೋರ ಪರಾಕ್ರುಮಿಯಾದ ಕೇಶಿಯು ಮಹಾಯಶನಾದ ಗೌತಮನಿಗೆ ಶಿರಸಾ ಅಭಿವಂದಿಸಿದನು. (86)

ಆಗ, ಆ ಸುಖಾವಹದಲ್ಲಿ, ಕಡೆಯ ತೀರ್ಥಂಕರನು ಹೇಳಿದಂತೆ ಮೊದಲ ತೀರ್ಥಂಕರನು ನುಡಿದ ಪಂಚಮಹಾವ್ರತದ ಧರ್ಮವನ್ನು ಭಾವಿಸಿ ನಡೆದನು. (87)

ಆ ಕೇಶಿ ಗೌತಮರ ಸಮಾಗಮದಲ್ಲಿ ಸದಾ ಶ್ರುತ ಶೀಲಗಳು ಪ್ರಮುಖವಾಗುತ್ತಿದ್ದುವು; ಬಹು ಮುಖ್ಯ ವಿಷಯಗಳು ನಿರ್ಣಯವಾದುವು. (88)

ಸರ್ವ ಪರಿಷೆಯೂ ಸಂತೋಷಪಟ್ಟು ಸನ್ಮಾರ್ಗದಲ್ಲಿ ನೆಲಸಿದರು. "ಭಗವಂತರು ಪ್ರಸನ್ನರಾಗಬೇಕು" ಎಂದು ಆ ಕೇಶಿ ಗೌತಮರನ್ನು ಸ್ತುತಿಸಿದರು. (89)

ಎಂದು ಹೇಳುತ್ತೇನೆ.

---

1. ತೀರ್ಥಂಕರರ ವಚನ.

* ಓಂ *

* ನಮೊ ಸಮಣಸ್ಸ ಭಗವಓ ಮಹಾವೀರಸ್ಸ *

# ಶ್ರೀ ವೀರ ಸ್ತುತಿ

"ಹತ್ಥೀಸು ಏರಾವಣಮಾಹು ಣಾಏ
ಸೀಹೋ ಮಿಗಾಣಂ ಸಲಿಲಾಣ ಗಂಗಾ ।
ಪಕ್ಖೀಸು ವಾ ಗರುಲೇ ವೇಣುದೇವೋ
ನಿವ್ವಾಣವಾದೀಣಿಹ ಣಾಯಪುತ್ತೇ ॥

"ಜೋಹೇಸು ಣಾಏ ಜಹ ವೀಸಸೇಣೇ
ಪುಪ್ಫೇಸು ವಾ ಜಹ ಅರವಿಂದಮಾಹು ।
ಖತ್ತೀಣ ಸೆಟ್ಠೇ ಜಹ ದಂತವಕ್ಕೇ
ಇಸೀಣ ಸೆಟ್ಠೇ ತಹ ವದ್ಧಮಾಣೇ ॥

"ದಾಣಾಣ ಸೆಟ್ಠಂ ಅಭಯಪ್ಪಯಾಣಂ
ಸಚ್ಚೇಸು ವಾ ಅಣವಜ್ಜಂ ವಯಂತಿ
ತವೇಸು ವಾ ಉತ್ತಮ ಬಂಭಚೇರೇ
ಲೋಗುತ್ತಮೇ ಸಮಣೇ ಣಾಯಪುತ್ತೇ ॥

"ಠಿಈಣ ಸೆಟ್ಠಾ ಲವಸತ್ತಮಾ ವಾ
ಸಭಾ ಸುಹಮ್ಮಾ ವ ಸಭಾಣ ಸೆಟ್ಠಾ ।
ನಿವ್ವಾಣಸೆಟ್ಠಾ ಜಹ ಸವ್ವಧಮ್ಮಾ
ಣ ಣಾಯಪುತ್ತಾ ಪರಮತ್ಥಿ ನಾಣೀ ॥

— ಸೂತ್ರಕೃತಾಂಗ: 1; 6; 21 – 24.

ಭಗವಂತನಾದ ಮಹಾವೀರನ

ಸ್ತೋತ್ರರೂಪವಾದ

ಈ '**ಶ್ರೀ ವೀರ ಸ್ತುತಿ**'ಯು

'ಸೂಯಗಡಂಗ'

ಎಂಬ ಜೈನಗ್ರಂಥದಿಂದ ಆಯ್ದುದು

# ಶ್ರೀ ವೀರ ಸ್ತುತಿ

"ಈ ಅನುಪಮವಾದ ಕೇವಲ ಹಿತವಾದ ಧರ್ಮವನ್ನು, ಚೆನ್ನಾಗಿ ಕಂಡುದನ್ನು, ತಿಳಿಸಿದವರು ಯಾರು?" ಎಂದು ಶ್ರಮಣರೂ ಬ್ರಾಹ್ಮಣರೂ ಗೃಹಸ್ಥರೂ ಪರತೀರ್ಥಿಕ[1]ರೂ ಕೇಳಿದ್ದಾರೆ. (1)

"ಜ್ಞಾತ್ರಿಪುತ್ರನ ಜ್ಞಾನವೆಂತಹದಾಗಿತ್ತು? ದರ್ಶನವೆಂತಹದಾಗಿತ್ತು? ಶೀಲವೆಂತಹದಾಗಿತ್ತು? ನಿನಗದು ಸರಿಯಾಗಿ ತಿಳಿದಿದ್ದರೆ, ಭಿಕ್ಷು, ನೀನು ಕೇಳಿದಂತೆ, ನಿನಗೆ ತಿಳಿಸಿದಂತೆ, ತಿಳಿಸು."[2] (2)

ಆ ಕ್ಷೇತ್ರಜ್ಞನು[3], ಕುಶಲನಾದ ಮಹರ್ಷಿಯು ಅನಂತ ಜ್ಞಾನಿ, ಅನಂತದರ್ಶಿ. ಕಣ್ಣ ಮುಂದಿದ್ದ ಆ ಯಶಸ್ವಿಯ ಧರ್ಮವನ್ನೂ ಧೃತಿಯನ್ನೂ ತಿಳಿದು, ಪರ್ಯಾಲೋಚಿಸು. (3)

ಆ ಪ್ರಾಜ್ಞನು ಮೇಲೆ ಕೆಳಗು ಸುತ್ತಿನ ದಿಕ್ಕುಗಳಲ್ಲಿಯ ತ್ರಸ ಸ್ಥಾವರ ಪ್ರಾಣಿಗಳನ್ನೂ ನಿತ್ಯ ಅನಿತ್ಯವಾದವುಗಳನ್ನೂ ಚೆನ್ನಾಗಿ ಕಂಡು ದ್ವೀಪದಂತೆ ಧರ್ಮವನ್ನು ಸಮತೆಯಿಂದ ಹೇಳಿದನು. (4)

ಅವನು ಸರ್ವದರ್ಶಿ, ಮೀರಿದ ಜ್ಞಾನ[4]ವುಳ್ಳವನು; ಕೊಳೆಗಳಿಲ್ಲದವನು; ಧೃತಿಮಂತನು, ಸ್ಥಿತಾತ್ಮನು, ಅನುತ್ತರನಾದವನು, ಸರ್ವ ಜಗತ್ತಿನಲ್ಲಿ ವಿದ್ವಾಂಸನು; ಗಂಟುಗಳನ್ನು ಮೀರಿದವನು; ಭಯವಿಲ್ಲದವನು, ಆಯುಸ್ಸು ಇಲ್ಲದವನು[5]. (5)

ಆ ಭೂತಿಪ್ರಜ್ಞ[6]ನು ತಡೆಯಿಲ್ಲದೆ ಸಂಚರಿಸುತ್ತ ಪ್ರವಾಹವನ್ನು ದಾಟಿ, ಧೀರನಾಗಿ, ಅನಂತಚಕ್ಷುವಾಗಿ, ಅನುತ್ತರನಾಗಿ, ಸೂರ್ಯನಂತೆ ತಪಿಸುವನು. ಪ್ರಜ್ವಲಿಸುವ ಬೆಂಕಿಯಂತೆ ಕತ್ತಲೆಯನ್ನು ಪ್ರಕಾಶಗೊಳಿಸುವನು. (6)

ಕಾಶ್ಯಪನು, ಆಶುಪ್ರಜ್ಞ[7]ನಾದ ಮುನಿಯು, ಜಿನರ ಈ ಅನುತ್ತರವಾದ ಧರ್ಮವನ್ನು ತಿಳಿಸಿರುವನು. ಸ್ವರ್ಗದ ದೇವತೆಗಳಲ್ಲಿ ಸಹಸ್ರನೇತ್ರನಾದ ಇಂದ್ರನು ಹೇಗೋ ಹಾಗೆ ಮಹಾನುಭಾವನು[8] (ಲೋಕದಲ್ಲಿ) ವಿಶಿಷ್ಟನಾದವನು. (7)

---

1. ಪರಮತೀಯ, ಪರಧರ್ಮಿಕ. 2. ಈ ಪ್ರಶ್ನೆಯನ್ನು ಜಂಬೂಸ್ವಾಮಿಯು ತನ್ನ ಆಚಾರ್ಯನಾದ ಸುಧರ್ಮನನ್ನು ಕೇಳಿದನು. ಮುಂದಿನದು ಸುಧರ್ಮನ ಉತ್ತರ. 3. ಆತ್ಮಜ್ಞ. 4. ಕೇವಲ ಜ್ಞಾನವೆಂಬುದು ಎಲ್ಲವನ್ನು ಮೀರಿದ ಜ್ಞಾನ. 5. ಪುನಃ ಜನಿಸದವನು. 6. ಅನಂತ ಪ್ರಜ್ಞ. 7. ಕೇವಲಿ. 8. ವರ್ಧಮಾನ.

ಅವನ ಪ್ರಜ್ಞೆಯು ಸಾಗರದಂತೆ ಅಕ್ಷಯವಾದುದು, ಮಹಾಸಮುದ್ರದಂತೆ ಅನಂತಪಾರವಾದುದು. ಅವನು ಕೊಳೆಗಳಿಲ್ಲದೆ, ಕಷಾಯಗಳಿಲ್ಲದೆ, ಮುಕ್ತನಾದವನು. ದೇವಾಧಿಪತಿಯಾದ ಶಕ್ರನಂತೆ ದ್ಯುತಿಮಂತನು. (8)

ಅವನು ವೀರ್ಯದಿಂದ ಪ್ರತಿಪೂರ್ಣವೀರ್ಯನಾದವನು. ಸರ್ವ ನಗಗಳಲ್ಲಿ ಶ್ರೇಷ್ಠವಾದ ಸುದರ್ಶನ[1]ದಂತೆ, ಮೋದಕ್ಕೆ ತವರಾದ ಸ್ವರ್ಗದಂತೆ, ಅವನು ಅನೇಕ ಗುಣಗಳಿಂದ ಕೂಡಿ ವಿರಾಜಿಸುವನು. (9)

(ಮೇರುವು) ಶತಸಹಸ್ರ ಯೋಜನ (ಎತ್ತರ). ಅದಕ್ಕೆ ಮೂರು ಕಂಡಕ[2]ಗಳು. ಅದಕ್ಕೆ ಪಂಡಗದ ಪತಾಕೆ[3]. ಅದು ತೊಂಬತ್ತೊಂಬತ್ತು ಸಾವಿರ ಯೋಜನಗಳು ಮೇಲೆದ್ದು, ಕೆಳಗೆ ಒಂದು ಸಹಸ್ರ ಇಳಿದಿದೆ. (10)

ಅದು ಆಕಾಶವನ್ನು ಮುಟ್ಟಿ ಭೂಮಿಯಲ್ಲಿ ಮುಳುಗಿದೆ. ಅದರ ಸುತ್ತ ಸೂರ್ಯರು[4] ಸುತ್ತುವರು. ಅದು ಚಿನ್ನದ ಬಣ್ಣ; ಅದರಲ್ಲಿ ಬಹು[5] ನಂದನಗಳು. ಅಲ್ಲಿ ಮಹೇಂದ್ರರು ರಮಿಸುವರು. (11)

ಆ ಪರ್ವತವು ಶಬ್ದಗಳಿಂದ[6] ಬಹುವಾಗಿ ಪ್ರಕಾಶಿಸುವುದು; ತಿಕ್ಕಿದ ಚಿನ್ನದ ಬಣ್ಣದಿಂದ ವಿರಾಜಿಸುವುದು. ಅದು ಗಿರಿಗಳಲ್ಲಿ ಅನುತ್ತರವಾದುದು. ಆ ಪರ್ವತವು ಏರಲು ಕಷ್ಟವಾದುದು. ಆ ಗಿರಿವರವು ಜ್ವಲಿಸುವ ಭೂಭಾಗದಂತಿದೆ. (12)

ಆ ನಗೇಂದ್ರವು ಭೂಮಿಯ ನಡುವೆ ನಿಂತು, ಸೂರ್ಯನಂತೆ ಶುದ್ಧಲೇಶ್ಯ[7]ದಿಂದ ಕಂಡುಬರುವುದು. ಅರ್ಚಿಮಾಲೆಗಳಿಂದ ಕೂಡಿದ ಬಹುವರ್ಣದ ಆ ಮನೋರಮ(ವಾದ ಪರ್ವತ)ವು ಹೀಗೆ ಕಾಂತಿಯಿಂದ ಬೆಳಗುವುದು! (13)

ಮಹಾಪರ್ವತವಾದ ಸುದರ್ಶನ ಗಿರಿಯ ಯಶಸ್ಸನ್ನು ಹೀಗೆ ವರ್ಣಿಸುವರು. ಜಾತಿ, ಯಶಸ್ಸು, ದರ್ಶನ, ಜ್ಞಾನ, ಶೀಲಗಳಿಂದ ಕೂಡಿದ ಶ್ರಮಣ ಜ್ಞಾತ್ರಿಪುತ್ರನೂ ಹೀಗೆಯೇ. (14)

---

1. ಮೇರು ಪರ್ವತ. 2 ಕಲ್ಲು, ಚಿನ್ನ, ವೈಡೂರ್ಯದ ಮೂರು ಹಂತಗಳು. 3. ಮೇರುವಿನ ನೆತ್ತಿಯಲ್ಲಿ ಪತಾಕೆಯಂತೆ ಪಂಡಕ ವನವಿದೆ. 4. ಜೈನರಲ್ಲಿ ಅನೇಕ ಸೂರ್ಯರು ಉಂಟು. 5. ಮೇರುವಿನಲ್ಲಿರುವ ನಂದನಗಳು ನಾಲ್ಕು: ಶಾಲವನ, ನಂದನವನ, ಸೌಮನಸವನ ಮತ್ತು ಪಂಡಕವನ. 6. ಮಂದರ, ಮೇರು, ಸುದರ್ಶನ, ಸುರಗಿರಿ ಮುಂತಾದ ಅನೇಕ ಶಬ್ದಗಳು. 7. ತೇಜಸ್ಸು.

ಉದ್ದವಾದ ಗಿರಿಗಳಲ್ಲಿ ನಿಷಧ ಶ್ರೇಷ್ಠವಾದಂತೆ, ವಲಯವಾದವು ಗಳಲ್ಲಿ ರುಚಕ ಶ್ರೇಷ್ಠವಾದಂತೆ, ಜಗತ್ತಿನ ಮುನಿಗಳಲ್ಲಿ ಅವನು ಭೂತಿ ಪ್ರಜ್ಞನು. ಪ್ರಾಜ್ಞರು ಹೀಗೆ ಹೇಳುವರು. (15)

ಅನುತ್ತರವಾದ ಧರ್ಮವನ್ನು ತಿಳಿಸಿ; ಬಿಳಿಯದಕ್ಕಿಂತ ಬಿಳಿಯಾದ, ಕೊಳೆಯಿಲ್ಲದೆ ಬಿಳಿಯಾದ, ಶಂಖ ಚಂದ್ರಗಳಂತೆ ಕೇವಲ ಬಿಳಿಬಿಳಿಯಾದ ಅನುತ್ತರವಾದ ಶ್ರೇಷ್ಠಧ್ಯಾನ[1]ವನ್ನು ಧ್ಯಾನಿಸಿದನು. (16)

ಆ ಮಹರ್ಷಿಯು ತನ್ನ ಜ್ಞಾನ ಶೀಲ ದರ್ಶನಗಳಿಂದ ತನ್ನ ಅಶೇಷ ಕರ್ಮವನ್ನು ಕಳೆದುಕೊಂಡು, ಅನುತ್ತರವೂ ಅಗ್ರವೂ ಪರಮವೂ ಆದ ಮೊದಲಿದ್ದು-ಕಡೆಯಿಲ್ಲದ[2] ಸಿದ್ಧಿಗತಿಗೆ ಹೋದನು. (17)

ಸುಪರ್ಣರು[3] ರಮಿಸುವ ಶಾಲ್ಮಲಿಯು ವೃಕ್ಷಗಳಲ್ಲಿ ಹೇಗೋ ಹಾಗೆ, ವನಗಳಲ್ಲಿ ನಂದನವನ್ನು ಶ್ರೇಷ್ಠವೆಂಬಂತೆ, ಜ್ಞಾನದರ್ಶನಗಳಿಂದ ಆ ಭೂತಿ ಪ್ರಜ್ಞನು ಹಾಗೆ. (18)

ಶಬ್ದಗಳಲ್ಲಿ ಮೇಘಗರ್ಜನೆಯು ಅನುತ್ತರವಾದಂತೆ, ತಾರೆಗಳಲ್ಲಿ ಚಂದ್ರನು ಮಹಾನುಭಾವನೆಂದಂತೆ, ಗಂಧಗಳಲ್ಲಿ ಚಂದನವನ್ನು ಶ್ರೇಷ್ಠ ವೆಂಬಂತೆ, ಇಹಪರಲೋಕಗಳ ಆಸೆಬಿಟ್ಟವನನ್ನು ಮುನಿಗಳಲ್ಲಿ (ಶ್ರೇಷ್ಠ ನೆಂದು) ಹೇಳುವರು. (19)

ಸಮುದ್ರಗಳಲ್ಲಿ ಸ್ವಯಂಭು ಶ್ರೇಷ್ಠವಾದಂತೆ, ನಾಗಗಳಲ್ಲಿ ಧರ ಣೇಂದ್ರವು ಶ್ರೇಷ್ಠವಾದಂತೆ, ಕಬ್ಬಿನ ರಸವು ರಸಗಳ ಪತಾಕೆಯಾದಂತೆ, ತನ್ನ ತಪಸ್ಸಿನಿಂದ (ಮಹಾವೀರನು) ಮುನಿಗಳಲ್ಲಿ ಮುಖ್ಯನು. (20)

ಆನೆಗಳಲ್ಲಿ ಐರಾವಣವನ್ನು, ಮೃಗಗಳಲ್ಲಿ ಸಿಂಹವನ್ನು, ಹೊಳೆಗಳಲ್ಲಿ ಗಂಗೆಯನ್ನು, ಪಕ್ಷಿಗಳಲ್ಲಿ ವೇಣುದೇವ[4]ನಾದ ಗರುಡನನ್ನು ಪ್ರಸಿದ್ಧವೆಂಬಂತೆ, ನಿರ್ವಾಣವಾದಿಗಳಲ್ಲಿ ಜ್ಞಾತ್ರಿಪುತ್ರನು ಪ್ರಸಿದ್ಧನು. (21)

ಯೋಧರಲ್ಲಿ ವಿಷ್ವಕ್ಸೇನ[5]ನು ಪ್ರಸಿದ್ಧನಾದಂತೆ, ಪುಷ್ಪಗಳಲ್ಲಿ ಅರವಿಂದ ವೆಂತಂತೆ, ಕ್ಷತ್ರಿಯರಲ್ಲಿ ದಂತವಕ್ರ[6]ನು ಶ್ರೇಷ್ಠನಾದಂತೆ, ವರ್ಧಮಾನನು ಋಷಿಗಳಲ್ಲಿ ಶ್ರೇಷ್ಠನು. (22)

---

1. ಶುಕ್ಲಧ್ಯಾನ. 2 ಸಿದ್ಧಿಗತಿಗೆ ಮೊದಲುಂಟು, ಕಡೆಯಿಲ್ಲ. 3. ಭವನಪತಿಗಳೆಂಬ ದೇವತೆಗಳು. 4 ವೇಣುದೇವನೆಂಬುದು ಗರುಡನ ಹೆಸರಂತೆ. 5. 'ವೀಸಸೇಣ' ಎಂಬುದನ್ನು ವಿಶ್ವಸೇನ ಎಂದು ಓದಿ, ಶೀಲಾಂಕನು ಹೀಗೆ ಅರ್ಥಮಾಡುವನು: ವಿಶ್ವಸೇನೆಯುಳ್ಳವನು, ಹಸ್ತ್ಯಶ್ವರಥಪದಾತಿ ಚತುರಂಗ ಸೇನಾ ಸಮೇತನಾದ ಚಕ್ರವರ್ತಿ. ಆದರೆ ಜೇಕಬಿ ಪಂಡಿತನು ಅದನ್ನು ವಿಷ್ವಕ್ಸೇನ ಎಂದರೆ ಕೃಷ್ಣ ಎಂದು ತಿಳಿಯುವನು. 6. 'ದಂತವಕ್ಕೇ' ಎಂಬುದನ್ನು ಜೇಕಬಿಯು

ದಾನಗಳಲ್ಲಿ ಅಭಯಪ್ರದಾನವನ್ನೂ ಸತ್ಯಗಳಲ್ಲಿ ಅನವದ್ಯ[7]ವಾದುದನ್ನೂ ಶ್ರೇಷ್ಠವೆಂದು ಹೇಳುವರು. ತಪಸ್ಸುಗಳಲ್ಲಿ ಬ್ರಹ್ಮಚರ್ಯವು ಉತ್ತಮ. ಶ್ರಮಣ ಜ್ಞಾತ್ರಿಪುತ್ರನು ಲೋಕೋತ್ತಮ. (23)

ಸ್ಥಿತಿವಂತರಲ್ಲಿ ಲವಸಪ್ತಮರು[8] ಶ್ರೇಷ್ಠ. ಸಭೆಗಳಲ್ಲಿ ಸೌಧರ್ಮ ಸಭೆ ಶ್ರೇಷ್ಠ. ಧರ್ಮಗಳಲ್ಲಿ ನಿರ್ವಾಣ ಶ್ರೇಷ್ಠ. ಜ್ಞಾನಿಗಳಲ್ಲಿ ಜ್ಞಾತ್ರಿಪುತ್ರನು ಪ್ರಧಾನ. (24)

ಅವನು (ಸಹನೆಯಲ್ಲಿ) ಪೃಥ್ವಿಯಂತೆ. ಅವನು (ಕರ್ಮಗಳನ್ನು) ಧ್ವಂಸಮಾಡುವವನು. ಅವನು ಆಸೆಹೋದವನು. ಆ ಆಶುಪ್ರಜ್ಞನು ಏನನ್ನೂ ಕೂಡಿಹಾಕುವುದಿಲ್ಲ. ಸಮುದ್ರದಂತಹ ಮಹಾ ಭವಸಾಗರವನ್ನು ಅವನು ದಾಟಿರುವನು. ಅನಂತಚಕ್ಷುವಾದ ಆ ವೀರನು ಅಭಯವನ್ನು ಕೊಟ್ಟಿರುವನು. (25)

ಅಧ್ಯಾತ್ಮದೋಷಗಳಾದ ಕ್ರೋಧ, ಮಾನ, ಮಾಯ, ಲೋಭವೆಂಬ ನಾಲ್ಕನ್ನೂ ಕಳೆದು ಆ ಅರ್ಹತನು, ಮಹರ್ಷಿಯು, ಪಾಪ ಮಾಡುವುದೂ ಇಲ್ಲ; ಮಾಡಿಸುವುದೂ ಇಲ್ಲ. (26)

ಕ್ರಿಯವಾದಿಗಳ, ಅಕ್ರಿಯಾವಾದಿಗಳ, ವೈನಾಯಿಕರ, ಅಜ್ಞಾನವಾದಿಗಳ ಮತಗಳನ್ನೆಲ್ಲ ತಿಳಿದು; ಸರ್ವ ತತ್ವಗಳನ್ನೂ ಪರಿಚ್ಛೇದಿಸಿ, ಜೀವವಿರುವವರೆಗು ಸಂಯಮವನ್ನು ನಡೆಸಿದನು. (27)

ಆತನು ಸ್ತ್ರೀಯರನ್ನೂ ರಾತ್ರಿ ಭೋಜನವನ್ನೂ ನಿವಾರಿಸಿ, ದುಃಖದ ಕ್ಷಯಕ್ಕಾಗಿ ತಪಸ್ಸು ನಡೆಸಿ, ಇಹಪರಲೋಕಗಳನ್ನು ತಿಳಿದು, ನಿವಾರಿಸಬೇಕಾದುದೆಲ್ಲವನ್ನೂ ಪ್ರಭುವು ನಿವಾರಿಸಿದನು. (28)

ಅರಹಂತನು ಹೇಳಿದ ಧರ್ಮವನ್ನು, ಸಮಂಜಸವಾಗಿ ಅರ್ಥಪದದಿಂದ ಕೂಡಿ ಶುದ್ಧವಾದುದನ್ನು ಕೇಳಿ, ಅದರಲ್ಲಿ ಶ್ರದ್ಧೆಯಿಡುವ ಜನರು ಆಯುಸ್ಸು ಇಲ್ಲದವರಾಗುವರು; ಅಥವಾ ದೇವಾಧಿಪನಾದ ಇಂದ್ರನಂತಾಗುವರು. (29)

ಎಂದು ಹೇಳುತ್ತೇನೆ.

[ಸೂತ್ರಕೃತಾಂಗ: I, 6.]

---

ದಂತವಕ್ರನೆಂದು ಓದುವನು. ಆದರೆ ಶೀಲಾಂಕನು ಅದನ್ನು 'ದಾಂತವಾಕ್ಯ' ಎಂದು ವಿವರಿಸುವನು. 'ಕ್ಷತಾನ್ ತ್ರಾಯನ್ತ ಇತಿ ಕ್ಷತ್ರಿಯಾಃ ತೇಷಾಂ ಮಧ್ಯೇ ದಾನ್ತಾ–ಉಪಶಾನ್ತಾ ಯಸ್ಯ ವಾಕ್ಯೇನೈವ ಶತ್ರವಃ ಸ ದಾನ್ತವಾಕ್ಯಃ'. 7. ಅಪಾಪವಾಗಿ ಪರಪೀಡನೆಯನ್ನು ಉಂಟುಮಾಡದುದು. 8. ಐದನೆಯ ಅನುತ್ತರವಿಮಾನವಾಸಿ ದೇವತೆಗಳು. ಇವರು ಇನ್ನೇಳು ಲವಕಾಲ ಹೆಚ್ಚು ಬಾಳಿದರೆ, ಸಿದ್ಧಿ ಪಡೆಯುವರಂತೆ.

* ಓಂ *

* ನಮೊ ಸಮಣಸ್ಸ ಭಗವಓ ಮಹಾವೀರಸ್ಸ *

# ಅನುಬಂಧ

## (ಜೈನ ಧರ್ಮ ಪರಿಚಯ)

ಮೇಲೆ ಕೊಟ್ಟಿರುವ ಜೈನ ಸಾಹಿತ್ಯವನ್ನು ತಿಳಿದು ಸವಿಯುವುದಕ್ಕೆ ಬೇಕಾದಷ್ಟೆ ಜೈನ ಧರ್ಮದ ಪರಿಚಯವನ್ನು ಮುಂದಿನ ಪುಟಗಳಲ್ಲಿ ಕೊಡಲಾಗಿದೆ. ಇಲ್ಲಿಯ ವಿವರಗಳು J. L. Jaini ಅವರ Outlines of Jainism, Mrs. Stevenson ಅವರ Heart of Jainism, ಮತ್ತು Sacred Books of the Jainas ಎಂಬ ಗ್ರಂಥಮಾಲೆಯ ಮುನ್ನುಡಿಗಳಿಂದ ಗ್ರಹಿಸಿ ಬರೆದುದು.

ವನ್ದೇ ವೀರಮ್



* ಚಿರಂ ವಡ್ಢತು ಬುದ್ಧವಚನಂ ತಿಟ್ಠತು ಚ ನಿಚ್ಚಂ *

# ಜೈನ ಧರ್ಮ ಪರಿಚಯ

ಒಂದು ಸ್ವಸ್ತಿಕ; ಮೇಲೆ ಮೂರು ಚುಕ್ಕಿ; ಅದರ ಮೇಲೆ ಮತ್ತೊಂದು ಚುಕ್ಕಿಯನ್ನು ಹೊತ್ತ ಒಂದು ಚಂದ್ರಾಕಾರ: ಇದು ಜೈನ ಧರ್ಮದ ಸರ್ವಸ್ವವನ್ನು ಚಿತ್ರರೂಪದಲ್ಲಿ ತೋರಿಸುವುದು. ಪ್ರತಿ ಜೀವಿಗೂ ಪ್ರಾಪ್ತವಾಗುವ ನಾಲ್ಕು **ಗತಿ**ಗಳನ್ನು ಸ್ವಸ್ತಿಕವೂ, ಆ ಗತಿಯಿಂದ ಪಾರಾಗ ಬೇಕಾದರೆ ಆಶ್ರಯಿಸಬೇಕಾದ **ಮೂರು ರತ್ನ**ಗಳನ್ನು ಮೇಲಿನ ಮೂರು ಚುಕ್ಕಿಗಳೂ, ಪಾರಾದನಂತರ ಪಡೆಯುವ **ಮೋಕ್ಷ**ವನ್ನು ಅದರ ಮೇಲಿನ ಚಿಹ್ನೆಯೂ ಸೂಚಿಸುವುದು.

## ನಾಲ್ಕು ಗತಿ

ನಾವು ವಾಸಿಸುವ ಈ ಭೂಮಿಯು **ಮಧ್ಯಲೋಕ.** ಇಲ್ಲಿ ಮಾನವರೂ ಹಕ್ಕಿಪಕ್ಕಿಗಳೂ ಪಶುಪ್ರಾಣಿಗಳೂ ಜನಿಸಿಬರುವುವು. ಇದು **ಮಾನುಷಗತಿ,** ಮತ್ತು **ತಿರ್ಯಗ್ಗತಿ.**

ಈ ಮಧ್ಯಲೋಕದ ಅಡಿಯಲ್ಲಿ, ಒಂದರ ಕೆಳಗೆ ಒಂದರಂತೆ, ಏಳು **ನರಕ**ಗಳಿವೆ. ಇಲ್ಲಿ **ಭವನಪತಿ, ವ್ಯಂತರ,** ಎಂಬ ಎರಡು ತೆರದ ಜೀವಿಗಳು ಉಂಟು. ಇದು **ನಾರಕಗತಿ.**

ಈ ಮಧ್ಯಲೋಕದ ಮೇಲಿರುವುದು ಊರ್ಧ್ವಲೋಕ. ಇಲ್ಲಿಯದು **ದೇವಗತಿ.** ಇಲ್ಲಿ **ಜ್ಯೋತಿಷಿ** ಮತ್ತು **ವಿಮಾನವಾ**ಸಿಗಳೆಂಬ ಎರಡು ತೆರದ ದೇವತೆಗಳಿರುವರು. ಈ ಜ್ಯೋತಿಷಿಗಳು ಸೂರ್ಯ, ಚಂದ್ರ, ಗ್ರಹ, ತಾರಾ, ನಕ್ಷತ್ರಗಳಲ್ಲಿ ವಾಸಿಸುವರು.

ವಿಮಾನವಾಸಿಗಳಲ್ಲಿ ಮೂರು ತೆರ. (೧) **ಸೌಧರ್ಮ**ವೆಂಬುದು ಮೊದಲಾಗಿ **ಅಚ್ಯುತ**ವೆಂಬುದು ಕಡೆಯಾದ ಹದಿನಾರು **ಕಲ್ಪ**ಗಳೆಂಬ ದೇವಲೋಕಗಳಲ್ಲಿ ವಾಸಿಸುವವರು. (೨) ಅದರ ಮೇಲಿನ ಒಂಬತ್ತು **ಗ್ರೈವೇಯಿಕ** ಸ್ವರ್ಗಗಳಲ್ಲಿ ವಾಸಮಾಡುವವರು. (೩) ಅದಕ್ಕೂ ಮೇಲಿನ ವಿಜಯ, ವಿಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧವೆಂಬ ಐದು **ಅನುತ್ತರ ವಿಮಾನ**ಗಳಲ್ಲಿ ವಾಸಿಸುವವರು.

ಹೀಗೆ, **ದೇವ ಮಾನುಷ ತಿರ್ಯಕ್ ನಾರಕ**ಗಳೆಂದು **ಗತಿ**ಗಳು ನಾಲ್ಕು.

## ಮೂರು ರತ್ನಗಳು

**ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ** ಮತ್ತು **ಸಮ್ಯಕ್ ಚಾರಿತ್ರ**ವೆಂಬುದು ಜೈನರ **ರತ್ನತ್ರಯ.**

**ಸಮ್ಯಕ್ ದರ್ಶನ:** ಆಪ್ತರಾದ **ತೀರ್ಥಂಕರ**ರಲ್ಲಿಯೂ ಜಿನಾಗಮದಲ್ಲಿಯೂ ಗುರುವಿನಲ್ಲಿಯೂ ಅಚಲವಾಗಿ ನಂಬುವುದು. **ನವತತ್ವ, ಷಡ್ದ್ರವ್ಯ** ಮತ್ತು **ಪಂಚಾಸ್ತಿಕಾಯ**ಗಳಲ್ಲಿ ಶ್ರದ್ಧೆಯಿಡುವುದು. ಮಿಥ್ಯಾದೇವತೆಗಳನ್ನು, ಮಿಥ್ಯಾಲೋಕವನ್ನು, ಮಿಥ್ಯಾಗುರುವನ್ನು ನಂಬದಿರುವುದು. ಮತ್ತು (೧) ಶಂಕೆಯಿಲ್ಲದಿರುವುದು, (೨) ಐಹಿಕಸುಖಗಳನ್ನೇ ಬಯಸದಿರುವುದು, (೩) ದೇಹವನ್ನು ಪ್ರೀತಿಸದೆ, ದ್ವೇಷಿಸದೆ ಸಮಭಾವದಿಂದಿರುವುದು, (೪) ಪರದರ್ಶನಗಳಿಗೆ ಮುಗ್ಧನಾಗದಿರುವುದು, (೫) ಶ್ರದ್ಧೆಯಿಲ್ಲದವರ ದೋಷಗಳನ್ನು ತಿದ್ದುವುದು, (೬) ಸಮ್ಯಕ್ ದರ್ಶನದಲ್ಲಿ ಜೀವಿಗಳನ್ನು ಸ್ಥಾಪಿಸುವುದು, (೭) ಸಾಧುಗಳಲ್ಲಿ ವಾತ್ಸಲ್ಯವಿಡುವುದು, ಮತ್ತು (೮) ಜೈನ ತತ್ವದ ಪ್ರಭಾವವನ್ನು ತೋರುವುದು—ಎಂಬ ಎಂಟು ಅಂಗಗಳಿಂದ ಕೂಡಿರುವುದು. ಮತ್ತು ತನ್ನ ಕುಲ, ಜಾತಿ, ಬಲ, ಸೌಂದರ್ಯ, ಜ್ಞಾನ, ಆಜ್ಞೆ, ತಪಸ್ಸುಗಳಿಗಾಗಿ ಅಹಂಕಾರ ಪಡದಿರುವುದು. ಇದು **ದರ್ಶನ.**

ಈ ಸಮ್ಯಕ್ ದರ್ಶನವು ತಾನಾಗಿಯೆ ಲಭಿಸಬಹುದು. ಅಥವಾ ಪರರ ಬೋಧೆಯಿಂದ ಲಭಿಸಬಹುದು.

**ಸಮ್ಯಕ್ ಜ್ಞಾನ:** ತಾನು ಸಮ್ಯಕ್ ದರ್ಶನದಿಂದ ಗ್ರಹಿಸಿದುದನ್ನು ಬುದ್ಧಿಯಿಂದ ಚೆನ್ನಾಗಿ ತಿಳಿದು ಅರಗಿಸಿಕೊಳ್ಳುವುದು **ಸಮ್ಯಕ್‌ಜ್ಞಾನ.** ಸಮ್ಯಕ್ ಜ್ಞಾನವು ಐದು ತೆರ: (೧) **ಮತಿ ಜ್ಞಾನ,** (೨) **ಶ್ರುತಜ್ಞಾನ,** (೩) **ಅವಧಿಜ್ಞಾನ,** (೪) **ಮನಃಪರ್ಯಯ ಜ್ಞಾನ,** ಮತ್ತು (೫) **ಕೇವಲ ಜ್ಞಾನ.**

**ಮತಿ**ಜ್ಞಾನವನ್ನು ಸ್ಮೃತಿ, ಚಿಂತೆ, ಸಂಜ್ಞೆ, ಆಲೋಚನೆ, ಊಹೆ ಎಂದೂ ಹೇಳುತ್ತಾರೆ. ಈ ಜ್ಞಾನವು ಪಂಚೇಂದ್ರಿಯಗಳ ಅಥವಾ ಮನಸ್ಸಿನ ಮೂಲಕ ಪಡೆದ ಜ್ಞಾನ. ಎರಡನೆಯದಾದ **ಶ್ರುತ**ವು ಓದಿ ಅಥವಾ ಕೇಳಿ ತಿಳಿದ ಜ್ಞಾನ. ಇದು ಜೈನರಿಗೆ ವೇದದಂತಿರುವ (ದ್ವಾದಶಾಂಗ) ಹನ್ನೆರಡು ಅಂಗಗಳೆಂಬ ಧರ್ಮಗ್ರಂಥಗಳನ್ನೋ, ಅದರಿಂದ ಹೊರತಾದ ಬೇರೆ ಧರ್ಮಗ್ರಂಥಗಳನ್ನೋ ಕೇಳಿ ಅಥವಾ ಓದಿಬಂದ ಜ್ಞಾನ. ಕಾಲದೇಶಗಳು ಎಷ್ಟೇ ದೂರವಾಗಿದ್ದರೂ ಆಗ ಅಲ್ಲಿ ನಡೆದ ಸರ್ವವನ್ನೂ ತಿಳಿಯುವ

ಜ್ಞಾನವು **ಅವಧಿ.** ಇದು ದೇವ ನಾರಕರಿಗೆ ಸಹಜವಾಗಿ ಇರುತ್ತದೆ. ಮನುಷ್ಯರು ಈ ಜ್ಞಾನವನ್ನು ಕರ್ಮಕ್ಷಯದಿಂದ ಸಂಪಾದಿಸಬಹುದು. ಪರರ ಮನಸ್ಸನ್ನು ತಿಳಿಯುವ ಜ್ಞಾನವು ನಾಲ್ಕನೆಯ **ಮನಃಪರ್ಯಯ.** ಇದನ್ನು ಸಂಯಮಿಗಳು ಸಂಪಾದಿಸುವರು. ಕಡೆಯ **ಕೇವಲ**ವೆಂಬುದು ಸರ್ವವ್ಯಾಪಿಯಾದ ಅನಂತದರ್ಶಿಯಾದ ಅನೂನವಾದ ಜ್ಞಾನ.

ಈ ಐದು ತೆರದ ಜ್ಞಾನಗಳಲ್ಲಿ ಮೊದಲ ಮೂರು ಜ್ಞಾನಗಳೂ ಇಂದ್ರಿಯಗಳನ್ನು ಅವಲಂಬಿಸಿರುವುದರಿಂದ ಕೆಲವು ವೇಳೆ ಅವು ತಪ್ಪಬಹುದು. ಆದರೆ ಮುಂದಿನ ಎರಡೂ ಅದರಂತಲ್ಲದೆ ಸಂಪೂರ್ಣವಾದವು.

**ಸಮ್ಯಕ್ ಚಾರಿತ್ರ:** ಸಮ್ಯಕ್ ದರ್ಶನದಿಂದ ಕಂಡು, ಸಮ್ಯಕ್ ಜ್ಞಾನದಿಂದ ತಿಳಿದುದನ್ನು ಪ್ರತಿದಿನದ ಬದುಕಿನಲ್ಲಿ, ಆಚರಣೆಯಲ್ಲಿ ತರುವುದು **ಸಮ್ಯಕ್ ಚಾರಿತ್ರ,** ಸದಾಚಾರ.

ಈ ಮೂರು ರತ್ನಗಳೂ ಒಂದನ್ನೊಂದು ಆಶ್ರಯಿಸಿ ಹೊಂದಿಕೊಂಡಿವೆ. ಈ ಮೂರರಲ್ಲಿ ಯಾವುದನ್ನೂ ಬಿಡುವಂತಿಲ್ಲ.

## ಮೋಕ್ಷವೆಂಬ ಪಂಚಮಗತಿ

ಮನುಷ್ಯನು ಈ ರತ್ನತ್ರಯವನ್ನು ಆಶ್ರಯಿಸಿದರೆ ಮೇಲೆ ಹೇಳಿದ ನಾಲ್ಕು ಗತಿಗಳ ಸಂಸಾರದಿಂದ ಬಿಡುಗಡೆ ಪಡೆದು, **ಮುಕ್ತಿ**ಹೊಂದುವನು: ಇದು ಅಚಲವಾದ ಐದನೆಯ ಗತಿ.

ನಮ್ಮ ಮಧ್ಯಲೋಕದ ಮೇಲಿರುವ ಹದಿನಾರು ಕಲ್ಪಗಳನ್ನೂ ಒಂಬತ್ತು ಗ್ರೈವೇಯಿಕಗಳನ್ನೂ ಐದು ಅನುತ್ತರ ಸ್ವರ್ಗಗಳನ್ನೂ ಮೀರಿದರೆ **ಲೋಕಾಗ್ರ**ದಲ್ಲಿ, **ಸಿದ್ಧಶಿಲೆ**ಯೆಂಬುದು ಸಿಕ್ಕುವುದು. ಇದೆ **ಸಿದ್ಧಿಗತಿ.** ಇದು ತೆರೆದ ಕೊಡೆಯ ಆಕಾರದಲ್ಲಿರುವುದು. ಸಿದ್ಧರು, ಸಂಸಾರದಿಂದ ಬಿಡುಗಡೆಪಡೆದು ಮುಕ್ತರಾದವರು, ಇದರ ಮೇಲೆ ಹೋಗಿ ವಾಸಿಸುವರು. ಅವರು ಅಲ್ಲಿಂದ ಪುನಃ ಸಂಸಾರಕ್ಕೆ ಬಾರರು.

## ವಿವರಣೆಗಳು

ಮೇಲೆ ಹೇಳಿದುದು ಸ್ಪಷ್ಟವಾಗಬೇಕಾದರೆ **ನವತತ್ವ, ಷಡ್ದ್ರವ್ಯ, ಪಂಚಾಸ್ತಿಕಾಯ** ಎಂದರೇನೆಂದು ತಿಳಿಯಬೇಕು. ಜೀವಿಯು ಸಂಸಾರದಲ್ಲಿ ತೊಳಲುವುದಕ್ಕೆ ಕಾರಣವಾದ **ಕರ್ಮ**ವನ್ನೂ ಆ ಕರ್ಮದಿಂದ ಜೀವಕ್ಕೆ ಬರುವ **ಲೇಶ್ಯ**ವನ್ನೂ ತಿಳಿಯಬೇಕು.

**ಜೀವ, ಅಜೀವ, ಪಾಪ, ಪುಣ್ಯ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ**—ಇವು **ನವತತ್ವ**ಗಳು.

**ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ**—ಇವು ಆರು **ದ್ರವ್ಯ**ಗಳು.

**ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ**—ಇವು ಐದು **ಅಸ್ತಿಕಾಯ**ಗಳು.

[ಮೇಲಿನ ಆರು ದ್ರವ್ಯಗಳನ್ನೂ ಐದು ಅಸ್ತಿಕಾಯಗಳನ್ನೂ ಅಜೀವ ತತ್ವದ ಅಡಿ ವಿವರಿಸಲಾಗುವುದು.]

## ಜೀವ

**ಜೀವ**ವೆಂಬುದು ಮೊದಲ **ತತ್ವ.** ಒಂದು ಹುಳು, ಹೂ, ಗಿಡ, ಮೃಗ, ಮನುಷ್ಯ ಮುಂತಾದ್ದರಲ್ಲಿ ಚೇತನೆಗೆ ಕಾರಣವಾದುದು **ಜೀವ.** ಜೀವವು ಅನಂತವಾದುದು, ಶಾಶ್ವತವಾದುದು. ಜೀವವು ಮುಕ್ತವಾಗಿರುವಾಗ ಅದರ **ಜ್ಞಾನ, ದರ್ಶನ, ವೀರ್ಯ, ಸುಖ**ಗಳು ಅನಂತವಾದುದು. ಅದೇ ಜೀವವು ದೇಹದಲ್ಲಿ ಸಿಕ್ಕಿಬಿದ್ದಾಗ ಅದು ಮಾಡುವ ಕರ್ಮಗಳಿಂದ ಅದರ ಮೇಲೆ ಹೇಳಿದ ನಾಲ್ಕು ಅನಂತಗುಣಗಳು ಮಾಸುವುದು. ಮನುಷ್ಯ ಜನ್ಮದ ಜೀವವು ಒಳ್ಳೆಯ ಕರ್ಮ ಮಾಡಿದರೆ ದೇವಗತಿಯಲ್ಲಿ ಜನಿಸುವುದು; ಕೆಟ್ಟ ಕರ್ಮ ಮಾಡಿದರೆ ತಿರ್ಯಕ್ ಅಥವಾ ನಾರಕಗತಿಯಲ್ಲಿ ಜನಿಸುವುದು; ಕರ್ಮಗಳೆಲ್ಲವನ್ನೂ ನಾಶಮಾಡಿದರೆ ಪಂಚಮಗತಿಯಾದ ಮುಕ್ತಿಗೆ ಹೋಗುವುದು.

ಸಂಸಾರಕ್ಕೆ ಸಿಕ್ಕಿಬಿದ್ದ ಜೀವಕ್ಕೆ ಒಂಬತ್ತು ಗುಣಗಳುಂಟು: (೧) ಅದು ದೇಹದಲ್ಲಿ ಹಿಂದೆ ಸೇರಿ, ಇಂದು ಸೇರಿರುವುದಲ್ಲದೆ, ಮುಂದೆಯೂ ಸೇರಿರುತ್ತದೆ. (೨) ಅದಕ್ಕೆ ಜ್ಞಾನ ದರ್ಶನಗಳು ಉಂಟು. (೩) ಅದಕ್ಕೆ ಸ್ಪರ್ಶ, ರಸ, ಗಂಧ, ವರ್ಣಗಳಿಲ್ಲ. (೪) ಅದು ತಾನು ಆಶ್ರಯಿಸುವ ದೇಹದ ತುಂಬ ಹರಡಿಕೊಳ್ಳುವುದು. (೫) ಅದು ಕರ್ಮಗಳನ್ನು ಮಾಡುವುದು. (೬) ಮಾಡಿದ ಕರ್ಮಗಳ ಫಲವನ್ನು ಅನುಭವಿಸುವುದು. (೭) ಅದು ಸಂಸಾರದಲ್ಲಿ ಭ್ರಮಿಸುವುದು. (೮) ಅದು ತನ್ನ ಮಾಸಿದ ಅನಂತ ಚತುಷ್ಟಯವನ್ನು ಬೆಳೆಸಿ ಮುಕ್ತವಾಗಬಲ್ಲುದು. (೯) ಅದರ ಸಹಜವಾದ ಗತಿ ಯಾವಾಗಲೂ ಮೇಲುಗಡೆಗೆ.

ಜೀವವನ್ನು ಜೈನರು ಎರಡು ತೆರನಾಗಿ, ಮೂರು ತೆರನಾಗಿ, ಹದಿನಾಲ್ಕು ತೆರದ ವರೆಗೆ ವಿಂಗಡಿಸುವರು. ಅದರಲ್ಲಿ ಮುಖ್ಯವಾಗಿ, ಜೀವಗಳನ್ನು **ಸ್ಥಾವರ** ಮತ್ತು **ತ್ರಸ** ಎಂದು ಎರಡು ತೆರನಾಗಿ ವಿಂಗಡಿಸುವರು.

**ಸ್ಥಾವರ** ಜೀವಗಳು ತಾವಾಗಿ ಇದ್ದಲ್ಲಿಂದ ಚಲಿಸಲಾರವು. ಇವುಗಳಿಗೆ ಒಂದೆ ಇಂದ್ರಿಯ: ಸ್ಪರ್ಶದ್ದು. ಇವು ಐದು ವಿಧ: (೧) **ಪೃಥ್ವೀಕಾಯ**—ಕಲ್ಲು, ನೆಲಗಳಲ್ಲಿರುವ ಜೀವ. (೨) **ಅಪ್‌ಕಾಯ**—ನೀರಿನಲ್ಲಿರುವ ಜೀವ. (೩) **ತೇಜಃಕಾಯ**—ಅಗ್ನಿಯಲ್ಲಿರುವ ಜೀವ. (೪) **ವಾಯುಕಾಯ**—ಗಾಳಿಯಲ್ಲಿರುವ ಜೀವ. (೫) **ವನಸ್ಪತಿಕಾಯ**—ಗಿಡ ಲತೆಗಳಲ್ಲಿರುವ ಜೀವ.

**ತ್ರಸ** ಜೀವಗಳು ತಾವಾಗಿ ಇದ್ದಲ್ಲಿಂದ ಚಲಿಸಬಲ್ಲುವು. ಇವುಗಳಿಗೆ ಇಂದ್ರಿಯಗಳುಂಟು. ಇವು ನಾಲ್ಕು ತೆರ: (೧) **ಎರಡು ಇಂದ್ರಿಯಗಳ ಜೀವ:** (ಸ್ಪರ್ಶ ಮತ್ತು ರಸ)—ಹುಳುಹುಪ್ಪಟೆಗಳು. (೨) **ಮೂರು ಇಂದ್ರಿಯಗಳ ಜೀವ:** (ಸ್ಪರ್ಶ, ರಸ, ಗಂಧ)—ಇರುವೆ, ತಿಗಣೆ, ಪತಂಗ. (೩) **ನಾಲ್ಕು ಇಂದ್ರಿಯಗಳ ಜೀವ:** (ಸ್ಪರ್ಶ, ರಸ, ಗಂಧ, ರೂಪ)—ಕಣಜ, ಸೊಳ್ಳೆ, ಚೇಳು, ನೊಣ, ಚಿಟ್ಟೆ . . . (೪) **ಐದು ಇಂದ್ರಿಯಗಳ ಜೀವ:** (ಸ್ಪರ್ಶ, ರಸ, ಗಂಧ, ರೂಪ, ಶಬ್ದ)—ದೇವತೆಗಳು, ಮನುಷ್ಯರು, ಮೃಗಾದಿಗಳು, ನಾರಕರು.

ಪುನಃ, ಜೀವಗಳನ್ನು ಪೃಥ್ವೀಕಾಯ, ಅಪ್‌ಕಾಯ, ತೇಜಃಕಾಯ, ವಾಯುಕಾಯ, ವನಸ್ಪತಿಕಾಯ, ತ್ರಸಕಾಯ ಎಂದು **ಆರು ತೆರನಾಗಿ** ಎಣಿಸುವರು.

## ಅಜೀವ

ಜೀವವಲ್ಲದ್ದು ಎಲ್ಲ **ಅಜೀವ.** ಈ ಜೀವ ಅಜೀವಗಳು ಯಾವಾಗಲೂ ಕೂಡಿಯೇ ಇರುತ್ತವೆಯಾದರೂ ಅವುಗಳನ್ನು ಪ್ರತ್ಯೇಕಿಸುವುದು ಅಸಾಧ್ಯವಲ್ಲ. ಜೀವ ಅಜೀವಗಳು ಕೂಡಿರುವವರೆಗೆ ಕರ್ಮ ಜನಿಸುವುದು. ಕರ್ಮ ಜನಿಸುವ ತನಕ ಸಂಸಾರದಲ್ಲಿ ಬಂಧನ. ಕರ್ಮ ಕ್ಷಯವಾದಾಗ ಜೀವವು ಅಜೀವದಿಂದ ಬಿಡುಗಡೆ ಹೊಂದಿ ಮುಕ್ತಿ ಪಡೆಯುವುದು.

ಅಜೀವದಲ್ಲಿ **ರೂಪೀ, ಅರೂಪೀ** ಎಂದು ಎರಡು ತೆರ.

**ರೂಪೀ** ಅಜೀವವನ್ನು **ಪುದ್ಗಲ**ವೆಂದು ಕರೆಯುತ್ತಾರೆ. ಜೀವಕ್ಕೆ ಇಲ್ಲದ ಗುಣಗಳೆಲ್ಲ ಪುದ್ಗಲಕ್ಕೆ ಉಂಟು. ಎಂದರೆ ಪುದ್ಗಲಕ್ಕೆ ಚೈತನ್ಯವಿಲ್ಲ;

ಪುದ್ಗಲಕ್ಕೆ ಬಣ್ಣ, ರಸ, ರೂಪ, ಗಂಧಗಳುಂಟು; ಅದನ್ನು ಕೈಯಿಂದ ಮುಟ್ಟಬಹುದು; ಪುದ್ಗಲವನ್ನು ನಾಶಮಾಡಬಹುದು, ಅಥವಾ ಅದರ ರೂಪ ಬದಲಾಯಿಸಬಹುದು. ಪುದ್ಗಲಗಳಿಂದ ಬಿಡುಗಡೆ ಹೊಂದಿ ಸಿದ್ಧ ವಾದ ಶುದ್ಧ ಜೀವಕ್ಕೆ ಬಣ್ಣ, ರಸ, ರೂಪ, ಗಂಧಗಳಿಲ್ಲ; ಅದು ಸ್ಪರ್ಶಕ್ಕೆ ಸಿಕ್ಕುವುದಿಲ್ಲ. ಪುದ್ಗಲದ ಮೇಲೆ ಹೇಳಿದ ಐದು ಗುಣಗಳು ಆ ಆ ಪುದ್ಗಲವನ್ನು ಅನುಸರಿಸಿ ಬೇರೆ ಬೇರೆಯಾಗುವುದು. ಪಂಚೇಂದ್ರಿಯ ಗಳೂ ಇಂದ್ರಿಯಗಳ ವಿಷಯಗಳೂ ದೇಹವೂ ಮನಸ್ಸೂ ಕರ್ಮಗಳೂ ಪುದ್ಗಲಗಳು. ಪುದ್ಗಲವನ್ನು ಆರು ತೆರನಾಗಿ ವಿಭಜಿಸುತ್ತಾರೆ: (೧) ಅತಿ ಸ್ಥೂಲ ಸ್ಥೂಲ—ಬೆಟ್ಟ, ಗುಡ್ಡ, ಕಬ್ಬಿಣದ ಕಂಬ ಇತ್ಯಾದಿ; (೨) ಸ್ಥೂಲ— ನೀರು, ಎಣ್ಣೆ, ಇತ್ಯಾದಿ. (೩) ಸ್ಥೂಲ ಸೂಕ್ಷ್ಮ (ಸ್ಥೂಲತೆ ಹೆಚ್ಚು, ಸೂಕ್ಷ್ಮತೆ ಕಡಿಮೆ)—ನೆರಳು, ಬಿಸಿಲು. (೪) ಸೂಕ್ಷ್ಮಸ್ಥೂಲ (ಸ್ಥೂಲತೆ ಕಡಿಮೆ, ಸೂಕ್ಷ್ಮತೆ ಹೆಚ್ಚು)—ವಾಸನೆ, 'ಶಬ್ದ, ರುಚಿ ಇತ್ಯಾದಿ. (೫) ಸೂಕ್ಷ್ಮ—ಇಂತಹದರಿಂದಲೇ **ಕರ್ಮ**ವೆಂಬ ಪುದ್ಗಲವಾಗುವುದು. (೬) ಸೂಕ್ಷ್ಮಕ್ಕಿಂತ ಸೂಕ್ಷ್ಮವಾದುದು ಅತಿಸೂಕ್ಷ್ಮ.

**ಅರೂಪೀ** ಅಜೀವದಲ್ಲಿ ನಾಲ್ಕು ತೆರ: (೧) **ಧರ್ಮ,** (೨) **ಅಧರ್ಮ,** (೩) **ಆಕಾಶ,** (೪) **ಕಾಲ.**

(೧) ಮೀನು ಓಡಿಯಾಡುವುದಕ್ಕೆ ನೀರು ಹೇಗೆ ಅತ್ಯಗತ್ಯವೋ, ಪುದ್ಗಲದೊಡಸೇರಿದ ಜೀವವು ಓಡಿಯಾಡುವುದಕ್ಕೆ **ಧರ್ಮ** ಹಾಗೆ. ಈ ಧರ್ಮವೆಂಬುದು ಒಂದು ಶಕ್ತಿ. ಜೀವಿಗಳು ಯಾವ ಕಾರ್ಯ ಮಾಡುವು ದಕ್ಕೂ ಇದು ನೆರವಾಗುವುದು.

(೨) ಪುದ್ಗಲದೊಡಗೂಡಿದ ಜೀವವು ಕೆಲಸಮಾಡದೆ ವಿರಮಿಸ ಬೇಕೆಂದಾಗ **ಅಧರ್ಮ** ಎಂಬ ಶಕ್ತಿಯು ಸಹಾಯಮಾಡುವುದು. ಮರದ ನೆರಳು ಬಿಸಿಲಿನಲ್ಲಿ ನಡೆಯುವವನನ್ನು ತನ್ನ ತಣ್ಪಿನಿಂದ ಆಕರ್ಷಿಸಿ, ತನ್ನ ಕೆಳಗೆ ನಿಲ್ಲಿಸಿಕೊಳ್ಳುವಂತೆ, ಅಧರ್ಮವೆಂಬ ಅಜೀವವು ದಣಿದ ಜೀವಿಯನ್ನು ತನ್ನಲ್ಲಿಗೆ ಆಕರ್ಷಿಸಿ ನಿಲ್ಲಿಸಿಕೊಳ್ಳುವುದು. ಜೀವದ ಸಮರಕ್ಕೆ ಧರ್ಮವು ಸಹಾಯಕವಾದರೆ, ಜೀವದ ವಿಶ್ರಾಂತಿಗೆ ಅಧರ್ಮವು ಸಹಾಯ ಮಾಡುವುದು.

ಧರ್ಮ ಅಧರ್ಮಗಳು ಎರಡೂ ಲೋಕದಲ್ಲಿ ಸರ್ವತ್ರವಾಗಿ ಅನಾದಿ ಕಾಲದಿಂದ ಅನಂತ ಕಾಲದ ವರೆಗೆ ಶಾಶ್ವತವಾಗಿ ಇರುವುವು. ಇವುಗಳಿಗೆ ಸ್ಪರ್ಶ, ಶಬ್ದ, ರಸ, ರೂಪ, ಗಂಧಗಳು ಇಲ್ಲ.

(೩) ಜೀವ ಅಜೀವಗಳು ಇರುವುದಕ್ಕೆ ಬೇಕಾದ ಅವಕಾಶಕ್ಕೆ **ಆಕಾಶ**ವೆಂದು ಹೆಸರು. ದೀಪ ಹಚ್ಚಿದರೆ, ಈ ಆಕಾಶವೆಂಬ ಅಜೀವವು ಬೆಳಕು ಬೆಳಗುವುದಕ್ಕೆ ಸ್ಥಲಕೊಡುತ್ತದೆ. ನೀರಿನಲ್ಲಿ ಸಕ್ಕರೆ ಹಾಕಿ ಕರಗಿದಾಗ, ಸಕ್ಕರೆಯು ನೀರಿನಲ್ಲಿ ಇರುವುದಕ್ಕೆ ಬೇಕಾದ ಅವಕಾಶವನ್ನು ಈ ಆಕಾಶವೆಂಬ ಅಜೀವವು ಮಾಡಿಕೊಡುತ್ತದೆ.

(೪) ಜೀವವೂ ಅಜೀವವೂ ಬೇರೆ ಬೇರೆ ಅವಸ್ಥಾಂತರಗಳನ್ನು ಪಡೆಯಲು ಕಾರಣವಾಗಿ, ಅದಕ್ಕೆ ನೆರವಾಗುವುದು **ಕಾಲ**ವೆಂಬ ನಾಲ್ಕನೆಯ ಅರೂಪೀ ಅಜೀವ. ಇದನ್ನು ಸಮಯ, ನಿಮಿಷ ಇತ್ಯಾದಿಯಾಗಿ ಮಾಸ ವರ್ಷಗಳ ಮೇರೆ ಸಾಮಾನ್ಯವಾಗಿ ಗಣಿಸಿದರು ಕೂಡ, ಕಾಲವನ್ನು ಹಾಗೆ ಗಣಿಸಲಾಗುವುದಿಲ್ಲ. ಕಾಲವು ಅನಾದಿಯಾದುದು, ಅನಂತವಾದುದು, ಅಗಾಧವಾದುದು.

ಈ ಅನಂತವಾದ ಕಾಲವನ್ನು ಅಸಂಖ್ಯ ಕಲ್ಪಗಳಾಗಿ ವಿಭಾಗ ಮಾಡುವರು. ಪ್ರತಿಕಲ್ಪವನ್ನೂ **ಅವಸರ್ಪಿಣಿ, ಉತ್ಸರ್ಪಿಣಿ** ಎಂದು ಮತ್ತೆ ಎರಡು ಭಾಗಮಾಡುವರು. ಅವಸರ್ಪಿಣಿಯಲ್ಲಿ ಧರ್ಮ, ಸತ್ಯ, ನ್ಯಾಯ, ಸುಖ ಮುಂತಾದವು ಕಡಿಕಡಿಮೆಯಾಗಿ, ಬರುಬರುತ್ತ ಅಧರ್ಮ, ಅಸತ್ಯ, ಅನ್ಯಾಯ, ದುಃಖ ಮುಂತಾದವು ಹೆಚ್ಚುತ್ತ ಹೋಗುತ್ತವೆ. ಉತ್ಸರ್ಪಿಣಿಯಲ್ಲಿ ಅಧರ್ಮ ಮುಂತಾದ ಅವಗುಣಗಳು ಕ್ರಮೇಣ ಕಡಿಕಡಿಮೆಯಾಗಿ, ಬರುಬರುತ್ತ ಧರ್ಮ ಮುಂತಾದ ಉದ್ಗುಣಗಳು ಹೆಚ್ಚುತ್ತವೆ. ಈಗ ನಾವಿರುವುದು ಅವಸರ್ಪಿಣಿ ಕಾಲದಲ್ಲಿ, ಎಂದರೆ ಸುಖ ಇಳಿಇಳಿದು ದುಃಖ ಹೆಚ್ಚೇರುವ ಕಾಲದಲ್ಲಿ. ಈ ಅವಸರ್ಪಿಣಿಯನ್ನು **ಸುಷಮ ಸುಷಮ** (ಪೂರ್ಣ ಸುಖ), **ಸುಷಮ** (ಸಾಮಾನ್ಯ ಸುಖ), **ಸುಷಮ ದುಃಷಮ** (ಹೆಚ್ಚು ಸುಖ—ಕೊಂಚ ದುಃಖ), **ದುಃಷಮ ಸುಷಮ** (ಹೆಚ್ಚು ದುಃಖ—ಕೊಂಚ ಸುಖ), **ದುಃಷಮ** (ಸಾಮಾನ್ಯ ದುಃಖ), ಮತ್ತು **ದುಃಷಮ ದುಃಷಮ** (ಸಂಪೂರ್ಣ ದುಃಖ)—ಎಂದು ಆರು ಭಾಗಮಾಡುತ್ತಾರೆ. ಪುನಃ, ಅವಸರ್ಪಿಣಿಯಾದ ಮೇಲೆ ಉತ್ಸರ್ಪಿಣಿ ಬರುತ್ತದೆ, ದುಃಖ ಇಳಿದು ಸುಖ ಹೆಚ್ಚುತ್ತದೆ. ಹೀಗೆ ಉತ್ಸರ್ಪಿಣಿ ಅವಸರ್ಪಿಣಿಗಳು ಒಂದರ ಹಿಂದೊಂದು ಬಿಡುವಿಲ್ಲದೆ ಬಳಸಿ ಕಾಲಚಕ್ರವನ್ನು ನಿಲ್ಲಿಸದೆ ನಡೆಸುತ್ತವೆ.

ಈ ಧರ್ಮ, ಅಧರ್ಮ, ಆಕಾಶ, ಕಾಲಗಳೆಂಬ ಅಜೀವಗಳು ಜೀವ ಮತ್ತು ಪುದ್ಗಲಗಳು ಕೂಡಿ ಆಡುವ ನಾಟಕಕ್ಕೆ ಶಕ್ತಿಯನ್ನೂ ವಿರಾಮವನ್ನೂ ಸ್ಥಳವನ್ನೂ ಅವಕಾಶವನ್ನೂ ಒದಗಿಸುತ್ತವೆ.

## ದ್ರವ್ಯ ಮತ್ತು ಅಸ್ತಿಕಾಯ

ಮೇಲಿನ ಜೀವ ಅಜೀವಗಳನ್ನು, ಎಂದರೆ, **ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ**ಗಳು ಆರನ್ನು **ದ್ರವ್ಯ**ಗಳೆಂದು ಕರೆಯುವರು. ಈ ಆರು ದ್ರವ್ಯಗಳೂ ಶಾಶ್ವತವಾದುವು. ಇವಕ್ಕೆ ಸತ್ತ್ವ ವೆಂಬ ಗುಣವುಂಟು; ಎಂದರೆ ಇವು ಹುಟ್ಟಿದಂತೆ ಕಾಣುವುವು, ಇದ್ದಂತೆ ಕಾಣುವುವು, ಲಯವಾದಂತೆ ಕಾಣುವುವು—ಆದರೂ ತಮ್ಮ ಸಹಜತೆ ಯನ್ನು ಕಳೆದುಕೊಳ್ಳವು.

ಉದಾಹರಣೆಗೆ ಜೀವವೆಂಬ ದ್ರವ್ಯವಿದೆ. ಅದಕ್ಕೆ ನಾಲ್ಕು ಅನಂತ ಸಹಜ ಗುಣಗಳಿವೆ. ಆ ಗುಣಗಳು ಮಾಸಿ ಅದು ಒಂದು ಆನೆಯ ದೇಹ ದಲ್ಲಿ ಜನಿಸುವುದು, ಆನೆಯಾಗಿ ಹುಟ್ಟುವುದು. ಆಗ ಆನೆಯ ದೇಹದಲ್ಲಿನ ಜೀವದ ಗುಣ ಲಕ್ಷಣಗಳು ಬೇರೆಯಾಗುವುವು. ಆನೆ ಸಾಯುವುದು; ಆ ಆನೆಯ ಜೀವ ಕರ್ಮವಶದಿಂದ ಮನುಷ್ಯನಾದರೆ, ಆಗ ಆ ಜೀವದ ಗುಣಲಕ್ಷಣಗಳೇ ಬೇರೆಯಾಗುವುವು. ಮನುಷ್ಯ ದೇಹದಲ್ಲಿರುವ ಆ ಜೀವವು ತನ್ನ ಮಾಸಿದ್ದ ಗುಣಗಳನ್ನು ಬೆಳಗಿಸಿಕೊಂಡರೆ ಆಗ ಮುಕ್ತಿ ಸಿಕ್ಕಿ ಜೀವಕ್ಕೆ ಸ್ವಸ್ವರೂಪ ಪ್ರಾಪ್ತವಾಗುವುದು.

ಹೀಗೆ ಜೀವದ್ರವ್ಯವು ತನ್ನ ಸಹಜ ಅನಂತಗುಣಗಳನ್ನು, ತನ್ನ ಜೀವತ್ವವನ್ನು ಎಂದರೆ **ಧ್ರೌವ್ಯ**(ಸ್ಥಿತಿ)ವನ್ನು ಕಾಪಾಡಿಕೊಂಡು, ಬೇರೆ ಬೇರೆ ಶರೀರಗಳನ್ನು ಆಶ್ರಯಿಸಿ ಬಿಟ್ಟುಹೋಗುವ ಪರ್ಯಾಯಗಳಿಂದ, ರೂಪಾಂತರಗಳಿಂದ, ತನ್ನ **ಉತ್ಪಾದ**(ಸೃಷ್ಟಿ) **ವ್ಯಯ**(ಲಯ)ಗಳನ್ನು ತೋರ್ಪಡಿಸುವುದು. ಇತರ ದ್ರವ್ಯಗಳೂ ಹೀಗೆಯೆ.

[ಈ ರೀತಿಯಲ್ಲಿ ಉತ್ಪಾದ, ಧ್ರೌವ್ಯ, ವ್ಯಯಗಳು ಈ ಆರು ದ್ರವ್ಯ ಗಳಿಗೆ ಸಹಜಗುಣವಾಗಿರುವುದರಿಂದ, ಈ ಆರು ದ್ರವ್ಯಗಳ ಸತ್ತ್ವವಾಗಿರು ವುದರಿಂದ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾಗಿ ಉಂಟೆಂಬ ಈಶ್ವರನನ್ನು ಜೈನರು ಒಪ್ಪುವುದಿಲ್ಲ.]

ಈ ಆರು ದ್ರವ್ಯಗಳಲ್ಲಿ ಕಾಲವೊಂದಕ್ಕೆ ಮಾತ್ರ ಇರಲು ಸ್ಥಳ ಬೇಕಾ ಗಿಲ್ಲ. ಮಿಕ್ಕ ಐದಕ್ಕೂ ಇರಲು ಸ್ಥಳ ಬೇಕು. ಈ ಐದನ್ನೂ **ಅಸ್ತಿಕಾಯ ಗಳು** ಎಂದು ಕರೆಯುತ್ತಾರೆ. ಅವುಗಳಿಗೆ ಸತ್ತ್ವವೆಂಬ ಸಹಜಗುಣ ವಿರುವುದರಿಂದ ಅವು (ಅಸ್ತಿ) ಇವೆ; ಅವುಗಳಿಗೆ ಸ್ಥಳ ಬೇಕಾದುದರಿಂದ ಅವು ಕಾಯಗಳು; ಆದ್ದರಿಂದ ಅವು ಅಸ್ತಿಕಾಯಗಳು.

## ಪುಣ್ಯ

ಒಳ್ಳೆಯ ಕರ್ಮವು, ಮೇಲುಗತಿ ಕೊಡುವಂತಹುದು, **ಪುಣ್ಯ**ವೆಂಬ ಮೂರನೆಯ ತತ್ವ. ಪುಣ್ಯಗಳು ಒಂಬತ್ತು ತೆರ: (೧) ಹಸಿದವರಿಗೆ ಅನ್ನ ನೀಡುವುದು—ಅನ್ನಪುಣ್ಯ. (೨) ದಾಹಗೊಂಡವರಿಗೆ ನೀರು ಕೊಡುವುದು—ಪಾನಪುಣ್ಯ. (೩) ಬಟ್ಟೆ ಕೊಡುವುದು—ವಸ್ತ್ರಪುಣ್ಯ. (೪) ಶ್ರಮಣರಿಗೆ ಬೀಡು ಮಾಡಿಕೊಡುವುದು—ಲೇಣಪುಣ್ಯ. (೫) ಹಾಸಿಗೆ ಕೊಡುವುದು-ಶಯನಪುಣ್ಯ. (೬) ಎಲ್ಲರಿಗೂ ಹಿತ ಬಯಸುವುದು—ಮನಪುಣ್ಯ. (೭) ಸೇವೆ ಸಹಾಯ ಮಾಡುವುದು—ಶರೀರಪುಣ್ಯ. (೮) ಮಾತಿನಿಂದ ಯಾರನ್ನೂ ನೋಯಿಸದೆ, ಧರ್ಮವನ್ನು ತಿಳಿಸುವುದು—ವಚನಪುಣ್ಯ. (೯) ಪೂಜಾರ್ಹರಿಗೆ ನಮಿಸುವುದು—ನಮಸ್ಕಾರಪುಣ್ಯ.

ಈ ಪುಣ್ಯಗಳಿಂದ ಬಣ್ಣ, ಬಲ, ಆರೋಗ್ಯ, ಸೌಂದರ್ಯ ಮುಂತಾದ ಶುಭಗಳು ಲಭಿಸುವುವು. ಪುಣ್ಯಮಾಡಿ ತಿರ್ಯಕ್ಕಾಗಬಹುದು, ಮನುಷ್ಯನಾಗಬಹುದು, ದೇವತೆಯಾಗಬಹುದು; ತೀರ್ಥಂಕರನಾಗುವ ಸ್ಥಿತಿಯನ್ನೂ ಪಡೆಯಬಹುದು. ಆದರೆ ಇದರಿಂದ ಮುಕ್ತಿ ಸಿಕ್ಕುವುದಿಲ್ಲ.

## ಪಾಪ

ಕೆಟ್ಟ ಕರ್ಮವು, ಕೆಳಗತಿಗೆ ನಡೆಸುವಂತಹದು, **ಪಾಪ**ವೆಂಬ ನಾಲ್ಕನೆಯ ತತ್ವ. ಪಾಪಗಳು ಹದಿನೆಂಟು ತೆರ: (೧) ಜೀವಹಿಂಸೆ—ಜೀವಿಗಳನ್ನು ಹಿಂಸಿಸಲು ಚಿಂತಿಸುವುದೂ, ಮಾತನಾಡುವುದೂ 'ಭಾವಹಿಂಸೆ'; ಜೀವಿಗಳನ್ನು ಹಿಂಸಿಸುವುದು 'ದ್ರವ್ಯಹಿಂಸೆ'. (೨) ಅಸತ್ಯ—ಸುಳ್ಳಾಡುವುದು. (೩) ಅದತ್ತಾದಾನ—ತನಗಾಗಿ ಕೊಡದ ವಸ್ತುವನ್ನು ತಾನು ತೆಗೆದುಕೊಳ್ಳುವುದು. (೪) ಅಬ್ರಹ್ಮಚರ್ಯ—ಮುನಿಯು ಸ್ತ್ರೀ ಚಿಂತನೆ ಮಾಡುವುದು; ಗೃಹಸ್ಥನು ಪರಸ್ತ್ರೀಯನ್ನು ಬಯಸುವುದು. (೫) ಪರಿಗ್ರಹ—ತನ್ನ ಆವಶ್ಯಕತೆಗಿಂತ ಹೆಚ್ಚಾದ ವಸ್ತುಗಳನ್ನು ತೆಗೆದು ಇಟ್ಟುಕೊಳ್ಳುವುದು. (೬) ಕ್ರೋಧ—ಪ್ರಶಸ್ತವಾದ ಕೋಪ ಪಾಪವಲ್ಲ; ಅಕಾರಣವಾದ ಅನ್ಯಾಯವಾದ ಕೋಪ ಪಾಪ. (೭) ಮಾನ—ತನ್ನ ಕುಲ, ಜಾತಿ, ಬಲ, ಧನ, ವಿದ್ಯೆಗಳಲ್ಲಿ ಪ್ರತಿಷ್ಠೆ. (೮) ಮಾಯ—ಮೋಸಮಾಡುವುದು. (೯) ಲೋಭ—ದುರಾಸೆ, ಅತ್ಯಾಸೆ. (೧೦) ರಾಗ—ಆಸಕ್ತಿ, ಮಮತ್ವ. (೧೧) ದ್ವೇಷ—ಈರ್ಷ್ಯೆ, ಅಸೂಯೆ

ಮುಂತಾದುವು. (೧೨) ಕ್ಲೇಶ—ಕಿರುಕುಳ ಕೊಡುವಿಕೆ. (೧೩) ಅವ್ಯಾಖ್ಯಾನ—ಯಾರನ್ನಾದರೂ ಕುರಿತು ಸಲ್ಲದ ಸುಳ್ಳುಕತೆ ಹೇಳುವುದು. (೧೪) ಪೈಶುನ್ಯ—ಚಾಡಿ ಹೇಳುವುದು. (೧೫) ನಿಂದೆ—ಮೂರು ವೇಳೆಯೂ ತಪ್ಪು ಹುಡುಕುವುದು, (೧೬) ರತಿ ಅರತಿ—ಸುಖವಾದರೆ ಹಿಗ್ಗುವುದು; ದುಃಖವಾದರೆ ತಗ್ಗುವುದು. (೧೭) ಮಾಯಾಮೃಷಾ—ಬಕಧ್ಯಾನದಂತೆ ತಪಸ್ಸುಮಾಡಿ ಮೋಸಮಾಡಿ ಸುಳ್ಳಾಡುವುದು, (೧೮) ಮಿಥ್ಯಾದರ್ಶನ—ಧರ್ಮವಲ್ಲದ ಧರ್ಮಗಳಲ್ಲಿ ನಂಬುವುದು.

ಈ ಮೇಲಿನ ಹದಿನೆಂಟು ಪಾಪಗಳಲ್ಲಿ ಕ್ರೋಧ, ಮಾನ, ಮಾಯ, ಲೋಭಗಳನ್ನು **ಕಷಾಯ**ಗಳೆಂದು ಹೇಳುವರು. ಈ ನಾಲ್ಕನ್ನು ಎಷ್ಟು ಬೇಗ ಹೋಗಲಾಡಿಸಿಕೊಂಡರಷ್ಟು ಜೀವಕ್ಕೆ ಹಿತ. ಕ್ರೋಧ ಹೋದಾಗ ಕ್ಷಮೆ ಬರುವುದು; ಮಾನ ಹೋದಾಗ ಮಾರ್ದವ ಬರುವುದು; ಮಾಯ ಹೋದಾಗ ಆರ್ಜವ ಬರುವುದು; ಲೋಭ ಹೋದಾಗ ತೃಪ್ತಿ ಬರುವುದು.

ಪಾಪ ಮಾಡಿದವನು ತಿರ್ಯಕ್ಕಾಗಿ ಜನಿಸುವನು; ಅಥವಾ ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಜೀವಿಯಾಗಿ ಜನಿಸುವನು; ಪಂಚೇಂದ್ರಿಯನಾದರೆ ಹೀನಜಾತಿಯಲ್ಲಿ, ಹೀನಕುಲದಲ್ಲಿ, ಜನಿಸುವನು. ಪಾಪಗಳಿಂದ ಬಣ್ಣ, ಬಲ, ಆರೋಗ್ಯ, ಸೌಂದರ್ಯಗಳು ಹೀನವಾಗುವುವು.

## ಕರ್ಮ

ಜೀವವು ಅಜೀವದೊಡನೆ ಸೇರಿದಾಗ ಪಾಪವಾದ, ಪುಣ್ಯವಾದ ಕೆಲಸಗಳನ್ನು ಮಾಡುತ್ತದೆ; ಆ ಕೆಲಸಗಳ ಫಲಗಳನ್ನು ಅನುಭವಿಸುತ್ತದೆ. ಈ ಫಲವು ಪುದ್ಗಲವು; ಇದೆ **ಕರ್ಮ.** ಈ ಕರ್ಮವು ತನ್ನನ್ನು ಜನಿಯಿಸಿದ ಜೀವಕ್ಕೆ ಅಂಟಿಕೊಂಡು, ಅದರ ಊರ್ಧ್ವಗತಿಯನ್ನು ತಡೆದು, ಕೆಳಗೆಳೆದು, ಸಂಸಾರದಲ್ಲಿ ಬಿಗಿದಿಡುವುದು.

ಕರ್ಮಗಳು **ಘಾತಿ, ಅಘಾತಿ** ಎಂದು ಎರಡು ವಿಧ.

**ಘಾತಿ ಕರ್ಮಗಳು ನಾಲ್ಕು:** ಜೀವವು ಸಹಜಸ್ಥಿತಿಯಲ್ಲಿರುವಾಗ ಅದಕ್ಕೆ **ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ**ಗಳೆಂಬ ನಾಲ್ಕು ಅನಂತಗುಣಗಳೆಂದು ಹಿಂದೆ ಹೇಳಿತು. ಈ ನಾಲ್ಕು ಅನಂತಗುಣಗಳನ್ನು ಘಾತಮಾಡುವ ನಾಲ್ಕು ತೆರದ ಕರ್ಮಗಳೂ ಘಾತಿ ಕರ್ಮಗಳು: (೧) ಅನಂತಜ್ಞಾನವನ್ನು ಮರೆಮಾಡುವ ಕರ್ಮ—**ಜ್ಞಾನಾವರಣೀಯ.** (೨) ಅನಂತದರ್ಶನವನ್ನು ಮುಚ್ಚುವದು—

**ದರ್ಶನಾವರಣೀಯ.** (೩) ಅನಂತವೀರ್ಯವನ್ನು ಮುಸುಳಿಸುವುದು—**ಅಂತರಾಯ.** (೪) ಅನಂತಸುಖವನ್ನು ಮಾಸುವುದು—**ಮೋಹನೀಯ.**

**ಅಘಾತಿ ಕರ್ಮಗಳು ನಾಲ್ಕು:** ಮೇಲಿನ ನಾಲ್ಕು ಕರ್ಮಗಳು ಜೀವದ ಅನಂತಗುಣಗಳ ಮೇಲೆ ತಮ್ಮ ಪ್ರಭಾವವನ್ನು ಬೀರುವುವು. ಆದರೆ, ಅಘಾತಿ ಕರ್ಮಗಳು ಜೀವಕ್ಕೆ ಯಾವ ಘಾತವನ್ನೂ ಮಾಡದೆ ಆ ಜೀವವು ಆಶ್ರಯಿಸಿದ ಶರೀರದ ಮೇಲೆ ತಮ್ಮ ಪ್ರಭಾವವನ್ನು ತೋರುವುವು. (೧) **ಆಯುಃಕರ್ಮ:** ಇದು ಜೀವಿಯ ಆಯುಸ್ಸನ್ನು, ಬದುಕುವ ಕಾಲವನ್ನು, ನಿರ್ಧರಿಸುವುದು. (೨) **ನಾಮಕರ್ಮ:** ಇದು ದೇಹ, ಎತ್ತರ, ಬಣ್ಣ, ಗಾತ್ರ ಮುಂತಾದುದನ್ನು ನಿಶ್ಚಯಿಸುವುದು. (೩) **ಗೋತ್ರ ಕರ್ಮ:** ಜನಿಸುವ ಜಾತಿ, ಕುಲ, ಗೋತ್ರಗಳನ್ನು ಗೊತ್ತುಮಾಡುವುದು. (೪) **ವೇದನೀಯ ಕರ್ಮ:** ಸಂಸಾರಿ ಜೀವಿಯು ಅನುಭವಿಸುವ ಸುಖ ದುಃಖಗಳನ್ನು ಈ ಕರ್ಮವು ನಿರ್ಣಯಿಸಿ ಕೊಡುವುದು.

[ಇವು ಎಂಟು ಕರ್ಮಗಳನ್ನು ಇನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿದರೆ, ಕರ್ಮಗಳ ಸಂಖ್ಯೆ ನೂರನಲುವತ್ತೆಂಟು ಆಗುವುದು.]

ಈ ಕರ್ಮಗಳ ನಾಶದಿಂದ ಮೋಕ್ಷ ಪ್ರಾಪ್ತಿ. ಜ್ಞಾನಾವರಣ ಹೋದರೆ ಕೇವಲಜ್ಞಾನವೂ ದರ್ಶನಾವರಣ ಹೋದರೆ ಕೇವಲದರ್ಶನವೂ ವೇದನೀಯ ಹೋದರೆ ಅವ್ಯಾಬಾಧತ್ವ (ಕ್ಲೇಶ ಖೇದಗಳಿಲ್ಲದ ಅನಂತ ಸುಖ)ವೂ ಮೋಹನೀಯ ನಾಶದಿಂದ ಅಚಲವಾದ ಸಮ್ಯಕ್ತ್ವವೂ ಲಭಿಸುವುವು. ಆಯುಃಕರ್ಮದ ನಾಶದಿಂದ ಸೂಕ್ಷ್ಮತೆ ಬರುವುದು. ನಾಮ ಕರ್ಮ ನಾಶದಿಂದ ಅವಗಾಹನತೆಯು (ಎಂದರೆ ಒಂದು ಜೀವವಿರುವಲ್ಲಿ ಇನ್ನೂ ಇತರ ಜೀವಗಳು ಪ್ರವೇಶಿಸಿ ವಾಸಮಾಡುವಿಕೆ) ಪ್ರಾಪ್ತವಾಗುವುದು. ಗೋತ್ರಕರ್ಮ ನಾಶದಿಂದ ಅಗೌರವವೂ ಅಲಾಘವವೂ ದೊರಕುವುದು. (ಎಂದರೆ, ಕರ್ಮದಿಂದ ಭಾರವಾಗಿ ಕೆಳಗಿಳಿಯುವುದಿಲ್ಲ; ಹಗುರಾಗಿ ಮೇಲೆ ಹತ್ತುವುದಿಲ್ಲ; ಅಚಲವಾಗಿ ಶಾಶ್ವತವಾಗಿ ಸಿದ್ಧಿಗತಿಯಲ್ಲಿ ವಾಸಿಸುವುದು.) ಅಂತರಾಯನಾಶನದಿಂದ ಅನಂತವೀರ್ಯ ಲಭಿಸುವುದು.

[ಜೀವವು ತನ್ನ ಕರ್ಮಗಳನ್ನು ಕ್ಷಯಿಸಿಕೊಂಡು ಮುಕ್ತಿಗೆ ಏರುವ ಸೋಪಾನಕ್ಕೆ ಹದಿನಾಲ್ಕು ಮೆಟ್ಟಲುಗಳು. ಈ ಮೆಟ್ಟಲುಗಳನ್ನು ಗುಣ ಸ್ಥಾನಗಳೆಂದು ಕರೆಯುವರು. ಮೆಟ್ಟಲು ಮೆಟ್ಟಲಿಗೂ ಜೀವವು ತನಗೆ ಅಜೀವದ ಸಂಬಂಧದಿಂದ ಬಂದ ಗುಣಗಳನ್ನು ಕಳೆದುಕೊಂಡು, ತನ್ನ

ಸಹಜಗುಣಗಳನ್ನು ಕ್ರಮವಾಗಿ ಬೆಳೆಸಿಕೊಂಡು, ಕಡೆಗೆ ಹದಿನಾಲ್ಕನೆಯ ಗುಣಸ್ಥಾನವಾದ ಸಿದ್ಧಿಗತಿಗೆ ಸೇರುವುದು.]

## ಲೇಶ್ಯ

ಮಾಡಿದ ಪುಣ್ಯ ಪಾಪಗಳಿಗನುಗುಣವಾಗಿ ಜೀವವು ಗತಿಚತುಷ್ಟಯವನ್ನು ಆಶ್ರಯಿಸುವುದು. ಮಾಡಿದ ಪುಣ್ಯ ಪಾಪಗಳ ಕರ್ಮಕ್ಕೆ ಅನುಗುಣವಾಗಿ, ಅಂಟಿಕೊಂಡ ಕರ್ಮಕ್ಕೆ ಉಚಿತವಾಗಿ, ಜೀವಕ್ಕೆ ಒಂದು ತರದ ತೆಳುಬಣ್ಣ ಬಳಿದು ಬರುವುದು. ಇದನ್ನು **ಲೇಶ್ಯ** ಎನ್ನುವರು.

ಈ ಲೇಶ್ಯಗಳು **ಯೋಗ**ದಿಂದ, ಕಷಾಯದಿಂದ ಜನಿಸುವುವು. **ಯೋಗ**ವೆಂದರೆ ಮನಸ್ಸು, ಮಾತು, ಮೈಯಿನ ಚಲನಗಳು. ಈ ಚಲನಗಳು ಕ್ರೋಧ, ಮಾನ, ಮಾಯ, ಲೋಭಗಳೆಂಬ ಕಷಾಯಗಳಿಂದ ಮಾರ್ಪಡುವುವು.

ಮೂರು ಲೇಶ್ಯಗಳು ಪಾಪದಿಂದ ಹುಟ್ಟುವುವು: ಕಪ್ಪು, ನೀಲ, ಮತ್ತು ಬೂದು. (೧) ಕಪ್ಪು ಲೇಶ್ಯದವನು ಬಹುಪಾಪ ಮಾಡುವವನು; ಇವನು ಕಂಡುದನ್ನೆಲ್ಲ ನಾಶಮಾಡುವವನು; ಮಾವಿನ ಹಣ್ಣು ತಿನ್ನಬೇಕಾದರೆ ಮರವನ್ನೇ ಬುಡಸಹಿತ ಧ್ವಂಸಮಾಡಿ ಎರಡು ಹಣ್ಣು ತಿನ್ನುವಂತಹವನು; ಇವನು ಬಹು ಕ್ರೂರಿ. (೨) ನೀಲ ಲೇಶ್ಯದವನು ಕೊಂಚ ಮೇಲು; ವಿಚಾರವಿಲ್ಲದೆ ಕಂಡವರಿಗೆ ಹಾನಿಮಾಡುವವನು; ಇವನು ಮಾವಿನ ಬುಡವನ್ನೇ ಮುರಿಯದಿದ್ದರು, ಮರವನ್ನು ಧ್ವಂಸಮಾಡುವಂತಹವನು. (೩) ಬೂದು ಲೇಶ್ಯದವನು ಅವನಿಗಿಂತ ವಾಸಿ. ನ್ಯಾಯ ಅನ್ಯಾಯಗಳನ್ನು ಗಣಿಸದೆ ಸ್ವಾರ್ಥವನ್ನು ಸಾಧಿಸುವವನು. ಇವನು ಬುಡ ಮರಗಳನ್ನು ಉಳಿಸಿದರು, ಅನೇಕ ಕೊಂಬೆಗಳನ್ನು ಮುರಿದು ಹಾಕುವಂತಹವನು.

ಮೂರು ಲೇಶ್ಯಗಳು ಪುಣ್ಯದಿಂದ ಹುಟ್ಟುವುವು: ಕೆಂಪು, ಪದ್ಮ, ಮತ್ತು ಶುಕ್ಲ. (೧) ಕೆಂಪು ಲೇಶ್ಯದವನು, ಕೊಂಬೆ ಮುರಿಯದಿದ್ದರೂ ಸಣ್ಣ ಸಣ್ಣ ಗೆಲ್ಲು ಮುರಿಯುವಂತಹವನು. ತನ್ನ ಹಿತ ಸಾಧಿಸುವಾಗ ಇತರರಿಗೆ ಆದಷ್ಟು ಕಡಿಮೆ ಹಾನಿಮಾಡುವನು. (೨) ಪದ್ಮ ಲೇಶ್ಯದವನು ಕೇವಲ ತನಗೆ ಬೇಕಷ್ಟೆ ಹಣ್ಣುಗಳನ್ನು ಕುಯಿದುಕೊಳ್ಳುವಂತಹವನು. ಇವನು ತನ್ನ ಹಿತಕ್ಕಾಗಿ ಕೂಡ ಇತರರಿಗೆ ಹಾನಿಮಾಡನು. (೩) ಶುಕ್ಲ ಲೇಶ್ಯದವನು ಉತ್ತಮೋತ್ತಮನು. ಇವನು ಮರದಿಂದ ಕಳಿತು ತಾನಾಗಿ

ಬಿದ್ದ ಹಣ್ಣನ್ನು ತಿನ್ನುವಂತಹವನು. ಈತನು ಶುದ್ಧನಾಗಿ, ದಯಾವಂತ ನಾಗಿ, ಯಾರಿಗೂ ನೋವುಮಾಡದೆ, ಅನುಕಂಪದಿಂದ ಸದ್ಧರ್ಮದಲ್ಲಿ ನಡೆಯುವನು.

## ಆಸ್ರುವ

ಜೀವವು ಮಾಡುವ ಶುಭಾಶುಭ ಕಾರ್ಯಗಳಿಂದ ಕರ್ಮವೆಂಬ ಪುದ್ಗ ಲವು ಜನಿಸುತ್ತದಷ್ಟೆ. ಈ ಪುದ್ಗಲವು ಜೀವದ ಬಳಿಗೆ ಹರಿದು ಬರುವುದಕ್ಕೆ **ಆಸ್ರುವ** ಎಂದು ಹೆಸರು. ಇದು ಐದನೆಯ ತತ್ವ.

ಆಸ್ರುವಕ್ಕೆ ದಾರಿಗಳು ನಲುವತ್ತೆರಡೆಂದು ಹೇಳಲಾಗಿದೆ. ಅದರಲ್ಲಿ ಮುಖ್ಯವಾದುದು ಐದು ಇಂದ್ರಿಯಗಳ ಮೂಲಕ, ನಾಲ್ಕು ಕಷಾಯಗಳ ಮೂಲಕ, ಪಂಚ ವ್ರತಗಳನ್ನು ಪಾಲಿಸದ ಮೂಲಕ, ಮತ್ತು ಮೂರು ಯೋಗದ ಮೂಲಕ ಆಗುವ ಆಸ್ರುವ.

ಆಸ್ರುವಗಳು ಎರಡು ವಿಧ: (೧) ಭಾವಾಸ್ರುವ—ಆಸ್ರುವಕ್ಕೆ ಮೂಲ ಕಾರಣವಾದ ಜೀವದ ಸ್ಥಿತಿ. (೨) ದ್ರುವ್ಯಾಸ್ರುವ—ಜೀವದ ಕಡೆಗೆ ಹರಿದು ಬರುವ ಪುದ್ಗಲ.

## ಬಂಧ

ಕರ್ಮವು ಹರಿದು ಬಂದು ಜೀವಕ್ಕೆ ಅಂಟಿಕೊಳ್ಳುವುದು **ಬಂಧ**ವೆಂಬ ಆರನೆಯ ತತ್ವ: ಇಲ್ಲಿ ಕೂಡ, ಭಾವಬಂಧ ಮತ್ತು ದ್ರುವ್ಯಬಂಧ ಎಂದು ಎರಡು ವಿಧ.

ಕರ್ಮದ ಪ್ರುಕೃತಿ, ಸ್ಥಿತಿ, ಅನುಭಾಗ, ಪ್ರುದೇಶಗಳನ್ನು ಆಶ್ರುಯಿಸಿ ಬಂಧವು ನಾಲ್ಕು ತೆರನಾಗುವುದು. (೧) ಜೀವಿಯ ಕರ್ಮವು ಅವನವನ ಸಹಜಗುಣಗಳಿಗನುಗುಣವಾಗಿರುವುದು. ಕೆಲವರದು ಹಿತವಾಗಿರುವುದು, ಕೆಲವರದು ಅಹಿತವಾಗಿರುವುದು. ಇದು 'ಪ್ರುಕೃತಿ'. (೨) ಕೆಲವರ ಕರ್ಮಗಳನ್ನು ಕಳೆಯಲು ಸಹಸ್ರಾರು ವರ್ಷ ಬೇಕಾಗುವುದು. ಕೆಲವ ರದು ಕೆಲವೇ ವರ್ಷಗಳಲ್ಲಿ ಕಳೆಯಬಹುದು. ಇದು 'ಸ್ಥಿತಿ'. (೩) ಮಾಡಿದ ಕಾರ್ಯ, ಅವುಗಳ ಉದ್ದೇಶ, ಇವುಗಳಿಗೆ ಉಚಿತವಾಗಿ ಕೆಲವು ಕರ್ಮದ ಬಲ ಹೆಚ್ಚಾಗಿರುವುದು, ಕೆಲವದರ ಬಲ ಕಡಿಮೆಯಾಗಿರುವುದು. ಇದು 'ಅನುಭಾಗ'. (೪) ಕೆಲವು ಕರ್ಮದಲ್ಲಿ ಪುದ್ಗಲ ತೆಳುವಾಗಿ ಹರಡಿರು ವುದು, ಕೆಲವದರಲ್ಲಿ ಒತ್ತಾಗಿ ಕೂಡಿಕೊಂಡಿರುವುದು. ಇದು 'ಪ್ರುದೇಶ'.

## ಸಂವರ

ಯೋಗ ಕಷಾಯಗಳು ಕಾರಣವಾಗಿ ಕರ್ಮವು ಜೀವಕ್ಕೆ ಹರಿದು ಸೇರುವುದೆಂದು ಹೇಳಿತು. ಅದರಂತೆ, ಯೋಗ ಕಷಾಯಗಳನ್ನು ತಡೆದರೆ ಕರ್ಮ ಹರಿಯುವುದು ನಿಲ್ಲುತ್ತದೆ. ನೀರು ತುಂಬಿದ ತೊಟ್ಟಿಗೆ ಹೊಸ ನೀರು ಬರುವುದನ್ನು ತಡೆದರೆ ಹಳೆಯ ನೀರು ಕಾಲಕ್ರಮದಲ್ಲಿ ಇಂಗಿ ತೊಟ್ಟಿ ಬರಿದಾಗುವಂತೆ, ಹೊಸ ಕರ್ಮ ಬರುವುದನ್ನು ತಡೆದರೆ ಹಳೆಯ ಕರ್ಮ ತಾನೆ ಕ್ಷಯವಾಗಿ ಜೀವ ಮುಕ್ತವಾಗುವುದು. ಹೀಗೆ ಹೊಸ ಕರ್ಮವನ್ನು ತಡೆಯುವಿಕೆಯು **ಸಂವರ**ವೆಂಬ ಏಳನೆಯ ತತ್ವ.

ಈ ಸಂವರವನ್ನು ಐದು ಸಮಿತಿಗಳಿಂದ, ಮೂರು ಗುಪ್ತಿಗಳಿಂದ, ಇಪ್ಪತ್ತೆರಡು ಪರೀಷಹಗಳಿಂದ, ಹತ್ತು ಶ್ರಮಣ ಧರ್ಮಗಳಿಂದ, ಐದು ಚಾರಿತ್ರ್ಯಗಳಿಂದ, ಹನ್ನೆರಡು ಭಾವನೆಗಳಿಂದ, ಒಟ್ಟು ಐವತ್ತೇಳು ವಿಧಗಳಿಂದ ನಡೆಸಬಹುದು.

**ಐದು ಸಮಿತಿಗಳು:** (೧) ಈರ್ಯಾ ಸಮಿತಿ—ಎಲ್ಲಿ ಯಾವಾಗ ನಡೆದರೂ, ಜಾಗರೂಕತೆಯಿಂದ, ಯಾವ ಪ್ರಾಣಿಗೂ ಹಿಂಸೆಯಾಗದಂತೆ ನೋಡಿಕೊಂಡು ನಡೆಯುವುದು. (೨) ಭಾಷಾ ಸಮಿತಿ—ಎಲ್ಲರಲ್ಲಿಯೂ ದಯೆಯಿಂದ ಮಾತನಾಡುವುದು. ಸುಳ್ಳಾಡದೆ, ಮಾತಿನಿಂದ ಯಾರನ್ನೂ ನೋಯಿಸದಿರುವುದು. (೩) ಏಷಣಾ ಸಮಿತಿ—ಭಿಕ್ಷೆಗಾಗಿ ಸಂಚಾರ ಮಾಡುವಾಗ, ಆಗಮಗಳಲ್ಲಿ ಮಾಡಕೂಡದೆಂದು ಸೂಚಿಸಿರುವ ನಲುವತ್ತೆರಡು ತಪ್ಪಿನಲ್ಲಿ ಯಾವುದನ್ನೂ ಮಾಡದಂತೆ ಅಪ್ರಮತ್ತನಾಗಿರುವುದು. (೪) ಆದಾನನಿಕ್ಷೇಪಣಾ ಸಮಿತಿ—ಬಟ್ಟೆಗಳನ್ನಾಗಲಿ ಪದಾರ್ಥಗಳನ್ನಾಗಲಿ ಕೊಂಡು ಕೆಳಗಿಡುವಾಗ ನೋಡಿ ಮಾಡಿ ಯಾವ ಜೀವಜಾತಕ್ಕೂ ಹಿಂಸೆಯಾಗದಂತೆ ಇಡುವುದು. (೫) ಉತ್ಸರ್ಗ ಸಮಿತಿ—ಆಹಾರದಲ್ಲಿ ಮಿಕ್ಕುದು ಮುಂತಾದ ಕೊಳೆಕಶ್ಮಲಗಳನ್ನು ಕಂಡಲ್ಲಿ ಎಸೆಯದೆ, ಜಾಗರೂಕತೆಯಿಂದ ಯಾವ ಜೀವಿಗೂ ಹಿಂಸೆಯಾಗದ ಕಡೆ, ಹಿಂಸೆಯಾಗದ ರೀತಿಯಲ್ಲಿ ಕೆಳಗೆ ಬಿಸುಡುವುದು.

**ಮೂರು ಗುಪ್ತಿ:** (೧) ಮನೋಗುಪ್ತಿ—ಸುಖ ದುಃಖಗಳಿಗೆ ಅಮಿತವಾಗಿ ವಶನಾಗದೆ, ಸಮತಾಭಾವವನ್ನು ಸರ್ವರಲ್ಲಿ ತೋರಿ, ತನ್ನ ಆತ್ಮಕಲ್ಯಾಣವನ್ನು ನೆನೆಯುವುದು. (೨) ವಚನಗುಪ್ತಿ—ಮೌನದಿಂದಿರುವುದು, ಅಥವಾ ಮಿತವಾಗಿ ಮಾತನಾಡುವುದು. (೩) ಕಾಯಗುಪ್ತಿ—ಆಗಮಗಳಲ್ಲಿ ಆಪ್ತರು ಹೇಳಿರುವ ಆಚರಣೆಗಳನ್ನು ಆಚರಿಸುವುದು.

**ಇಪ್ಪತ್ತೆರಡು ಪರೀಷಹ:**[1] ಗುರಿಯನ್ನು ಕುರಿತ ಮಾರ್ಗದಲ್ಲಿ ಬಂದೊದಗುವ ತೊಂದರೆಗಳು; ಹಸಿವು, ದಾಹ ಮುಂತಾದ ಇಪ್ಪತ್ತೆರಡು ತರದವು. ಇವುಗಳನ್ನು ಗೆದ್ದು ಮುಂದುವರಿಯಬೇಕು: (೧) ಹಸಿವು ಸಹಿಸುವುದು. (೨) ದಾಹ ಸಹಿಸುವುದು. (೩) ಚಳಿ ಸಹಿಸುವುದು. (೪) ಬಿಸಿ ಸಹಿಸುವುದು. (೫) ಸೊಳ್ಳೆ ನೊಣಗಳ ಕಡಿತ ಸಹಿಸುವುದು. (೬) ಬಟ್ಟೆಯಿರಲಿ, ಇಲ್ಲದಿರಲಿ; ಇದ್ದುದರಲ್ಲಿ ತೃಪ್ತನಾಗಿರುವುದು. (೭) ಬೀಡುಸಿಕ್ಕಿದ ಕಡೆ ತಂಗುವುದು. (೮) ಹೆಂಗಸರ ಸಹವಾಸ ಬಿಡುವುದು. (೯) ಎಲ್ಲಿಯೂ ಹೆಚ್ಚುದಿನ ನಿಲ್ಲದೆ ಗ್ರಾಮದಿಂದ ಗ್ರಾಮಕ್ಕೆ ಸಂಚರಿಸುವುದು. (೧೦) ನಿಷಿದ್ಧ[2]ವಾದ ಸ್ಥಾನಗಳಲ್ಲಿ ಆಸನವನ್ನು ಕಲ್ಪಿಸಿ ಧ್ಯಾನಮಾಡುವುದು. (೧೧) ಮಲಗಲು ಜಾಗ ದೊರೆತಲ್ಲಿ ಮಲಗುವುದು. (೧೨) ಬೈಗುಗಳನ್ನು ಸಹಿಸುವುದು. (೧೩) ಬಡಿತವನ್ನು ಸಹಿಸುವುದು. (೧೪) ಯಾಚಿಸುವಾಗ ಸಂಭವಿಸುವ ನಿಷ್ಠುರವನ್ನು ಸಹಿಸುವುದು. (೧೫) ಯಾಚಿಸಿ, ಭಿಕ್ಷೆ ಸಿಕ್ಕದಿದ್ದರೂ ಸಹಿಸುವುದು. (೧೬) ರೋಗ ಬಂದರೆ, ಗೋಳಾಡದೆ, ಅದಕ್ಕೆ ಮದ್ದುಮಾಡದೆ, ದೇಹದ ಗೊಡವೆ ಮರೆತು ಸಹಿಸುವುದು. (೧೭) ದರ್ಭೆ ಮುಳ್ಳು ಮುಂತಾದುವು ತಾಗಿದ ನೋವನ್ನು ಸಹಿಸುವುದು. (೧೮) ಮೈಯ ಮಲವನ್ನು ನೀರಿನಿಂದ ತೊಳೆಯದೆ ಆ ಅಸುಖವನ್ನು ಸಹಿಸುವುದು. (೧೯) ತನಗೆ ಪರರು ಮಾಡಿದ ಸತ್ಕಾರಕ್ಕೆ ಹಿಗ್ಗದಿರುವುದು, ಅಸತ್ಕಾರಕ್ಕೆ ಕುಗ್ಗದಿರುವುದು. (೨೦) ತನ್ನ ಪ್ರಜ್ಞೆಗೆ ತಾನೆ ಮೆಚ್ಚದಿರುವುದು. (೨೧) ತನ್ನ ಅಜ್ಞಾನಕ್ಕೆ ದುಃಖಿಸಿ ಗೋಳಾಡದಿರುವುದು. (೨೨) ಸಮ್ಯಕ್ತ್ವವನ್ನು ಸಾಧಿಸುವಾಗ ಒದಗಿದ ಎಡರುಗಳಿಗೆ ಹೆದರದೆ, ತನ್ನ ಧರ್ಮದಲ್ಲಿ ಶಂಕೆಪಡದೆ, ನಿಶ್ಶಂಕೆಯಿಂದಿರುವುದು.

**ಹತ್ತು ಶ್ರಮಣ ಧರ್ಮ:** (೧) ಕ್ಷಮೆ—ಕೋಪವನ್ನು ತಡೆದು ಕ್ಷಮಿಸುವಿಕೆ. (೨) ಮಾರ್ದವ—ಅಭಿಮಾನವನ್ನು ಮೆಟ್ಟಿ ವಿನಯವನ್ನು ಬೆಳಸುವಿಕೆ. (೩) ಆರ್ಜವ—ಮಾಯೆ ಮೋಸಗಳನ್ನು ಉಳಿದು ಋಜುತೆಯನ್ನು ಹೆಚ್ಚಿಸುವಿಕೆ. (೪) ನಿರ್ಲೋಭತೆ—ಲೋಭವಿಲ್ಲದೆ ತುಷ್ಟಿಯಿಂದಿರುವಿಕೆ. (೫) ತಪ[3]—ತಪಸ್ಸನ್ನು ಆಚರಿಸುವುದು. (೬) ಸಂಯಮ—ಮನಸ್ಸು, ಮಾತು, ಮೈಗಳನ್ನು ತಡೆದು ನಿಗ್ರಹಿಸುವುದು. (೭) ಸತ್ಯ—

1. ಇವುಗಳನ್ನು ಮಹಾವೀರನು ಆಚರಿಸಿದುದಕ್ಕೆ ಪುಟ ೩೧—೩೮ ನೋಡಿ.

2. ಸಾಮಾನ್ಯರಿಗೆ ನಿಷಿದ್ಧವಾದ ಶ್ಮಶಾನ ಮುಂತಾದ ಕಡೆ. 3. ಪುಟ ೧೧೯—೧೨೦.

ನಿಜವಾದುದನ್ನೇ ಹೇಳಿ ಸುಳ್ಳಾಡದಿರುವುದು. (೮) ಶೌಚ— ಕೆಟ್ಟ ಆಲೋಚನೆ, ಕೆಟ್ಟ ಮಾತು, ಕೆಟ್ಟ ಕಾರ್ಯಗಳಿಲ್ಲದೆ ಶುಚಿಯಾಗಿರುವುದು. (೯) ಅಕಿಂಚನತ್ವ— ತನ್ನದಲ್ಲದ ಯಾವುದನ್ನೂ ತೆಗೆದುಕೊಳ್ಳದೆ, ಸಂಗ್ರಹಿಸದಿರುವುದು. (೧೦) ಬ್ರಹ್ಮಚರ್ಯ.

**ಐದು ಚಾರಿತ್ರ:** (೧) ಸಾಮಾಯಿಕ— ಪಾಪಕರ್ಮಗಳನ್ನು ಬಿಟ್ಟು, ಧ್ಯಾನ ಮುಂತಾದ ಸತ್ಕರ್ಮಗಳಲ್ಲಿ ನಿರತನಾಗುವುದು. (೨) ಮಾಡಿದ ಪಾಪಕಾರ್ಯಕ್ಕೆ ಪಶ್ಚಾತ್ತಾಪಪಟ್ಟು, ಪ್ರಾಯಶ್ಚಿತ್ತ ಮಾಡಿಕೊಳ್ಳುವುದು. (೩) ವಿಶುದ್ಧಿಗಾಗಿ ಹಲವು ತಿಂಗಳು ತಪಸ್ಸು ನಡೆಸುವುದು. (೪) ಆದಷ್ಟು ಮಟ್ಟಿಗೆ ಐಹಿಕ ವಿಷಯಗಳಿಗೆ ಅಂಟಿಕೊಳ್ಳದಿರುವುದು. (೫) ಆತ್ಮವೊಂದನ್ನೇ ಗಮನದಲ್ಲಿಡುವುದು.

**ಹನ್ನೆರಡು ಭಾವನೆ:** (೧) ಅನಿತ್ಯಭಾವನೆ— ತಾನೂ ತನ್ನವರೂ ಲೋಕವೂ ಅನಿತ್ಯವಾದುದೆಂಬುದನ್ನು ಮೇಲಿಂದ ಮೇಲೆ ಚಿಂತಿಸುವುದು. (೨) ಅಶರಣ ಭಾವನೆ— ಮುಪ್ಪು ಸಾವುಗಳು ಬಂದಾಗ ತನ್ನನ್ನು ಯಾರೂ ಕಾಪಾಡರೆಂದೂ ತಾನು ಅನಾಥನೆಂದೂ ಭಾವಿಸುವುದು. (೩) ಸಂಸಾರ ಭಾವನೆ— ಕರ್ಮ ಸಂಚಯನವಾಗುತ್ತಿರುವ ತನಕ ಜೀವಕ್ಕೆ ನಾಲ್ಕು ಗತಿ ತಪ್ಪಿದುದಲ್ಲವೆಂದು ಭಾವಿಸುವಿಕೆ. (೪) ಏಕತ್ವಭಾವನೆ— ಹುಟ್ಟುವಾಗ ಒಂಟಿಯಾಗಿ ಬಂದೆವು, ಹೋಗುವಾಗ ಒಂಟಿಯಾಗಿ ಹೋಗುತ್ತೇವೆ ಎಂಬುದನ್ನು ಭಾವಿಸುವುದು. (೫) ಅನ್ಯತ್ವಭಾವನೆ— ಜೀವ, ದೇಹ ಒಂದೇ ಅಲ್ಲ; ಜೀವ ದೇಹದಿಂದ ಅನ್ಯ ಎಂಬುದನ್ನು ಭಾವಿಸುವುದು. (೬) ಅಶೌಚ ಭಾವನೆ— ದೇಹವು ಅಶುಚಿಯೆಂಬುದನ್ನು ಭಾವಿಸುವಿಕೆ. (೭) ಆಸ್ರವ ಭಾವನೆ— ಹರಿಯಲು ಬಿಟ್ಟಿರುವ ತನಕ ಕರ್ಮವು ಜೀವದೆಡೆಗೆ ಹರಿದು ಬರುವುದೆಂಬುದನ್ನು ಭಾವಿಸುವಿಕೆ. (೮) ಸಂವರ ಭಾವನೆ— ಹೊಸ ಕರ್ಮವು ಜೀವದೆಡೆಗೆ ಹರಿಯದಂತೆ ಮಾಡುವ ಮಾರ್ಗಗಳನ್ನು ಭಾವಿಸುವುದು. (೯) ನಿರ್ಜರಾ ಭಾವನೆ— ತಪಸ್ಸುಗಳಿಂದ ಪೂರ್ವಕರ್ಮವನ್ನು ಕ್ಷಯಿಸಬಹುದೆಂಬುದನ್ನು ಭಾವಿಸುವಿಕೆ. (೧೦) ಲೋಕ ಭಾವನೆ-ಲೋಕಕ್ಕೆ ಸೃಷ್ಟಿಕರ್ತನಿಲ್ಲವೆಂದೂ ಷಡ್ದ್ರವ್ಯಗಳು ಶಾಶ್ವತವೆಂದೂ ಭಾವಿಸುವಿಕೆ. (೧೧) ಬೋಧಿಬೀಜ ಭಾವನೆ:-ಯಾವುದನ್ನು ಪಡೆಯುವುದು ಸುಲಭವಾದರೂ ರತ್ನತ್ರಯವನ್ನು ಪಡೆಯುವುದು ಸುಲಭವಲ್ಲವೆಂಬುದನ್ನು ಭಾವಿಸುವಿಕೆ. (೧೨) ಧರ್ಮ ಭಾವನೆ:— ಅಹಿಂಸೆಯು ಪರಮಧರ್ಮ, ರತ್ನತ್ರಯಕ್ಕೆ ಶರಣಾಗಿ ಜಿನಮಾರ್ಗದಲ್ಲಿ ನಡೆಯುವುದು ಪರಮಧರ್ಮ, ಎಂದು ಭಾವಿಸುವಿಕೆ.

## ನಿರ್ಜರಾ

ಜೀವಕ್ಕೆ ಹೊಸ ಕರ್ಮ ಬಂದು ಮುತ್ತಿಕೊಳ್ಳದಂತೆ ತಡೆಯುವುದು **ಸಂವರ**ವೆಂಬ ಏಳನೆಯ ತತ್ವವೆಂದು ಹೇಳಿತು. ಆದರೆ ಆಗಲೇ ಅಂಟಿಕೊಂಡಿರುವ ಹಳೆಯ ಕರ್ಮವನ್ನು ತಕ್ಕ ಉಪಾಯಗಳ ಮೂಲಕ ಕಳಚುವುದು **ನಿರ್ಜರೆ**ಯೆಂಬ ಎಂಟನೆಯ ತತ್ವ. ಈ ಅಂಟಿಕೊಂಡ ಹಳೆಯ ಕರ್ಮದಲ್ಲಿ, ಪಕ್ವವಾದ ಕರ್ಮವು ತಾನಾಗಿಯೆ ಸಹಜವಾಗಿ ಕಳಚಿ ಜೀವವನ್ನು ಬಿಟ್ಟುಹೋಗುವುದು; ಅಪಕ್ವವಾದ ಕರ್ಮ ಮಾತ್ರ ಪಕ್ವವಾಗುವವರೆಗು ಅಲ್ಲಿಯೇ ಇರುವುದು. ಈ ಅಪಕ್ವವಾದ ಕರ್ಮಗಳನ್ನು ಹಲವು ತೆರದ **ತಪಸ್ಸು**ಗಳ ಅಭ್ಯಾಸದಿಂದ ಬೇಗನೆ ಪಕ್ವಗೊಳಿಸಿದರೆ, ಅವೂ ಬೇಗನೆ ಕಳಚುವುವು; ಜೀವವು ಬೇಗನೆ ಮುಕ್ತವಾಗುವುದು.

**ತಪಸ್ಸು**ಗಳು ಎರಡು ತೆರ: ಬಾಹ್ಯ ತಪಸ್ಸು, ಮತ್ತು ಅಭ್ಯಂತರ ತಪಸ್ಸು.

**ಬಾಹ್ಯ ತಪಸ್ಸು** ಆರು ತೆರ: (೧) ಅನಶನ ತಪಸ್ಸು—ಒಂದು ದಿನ, ಎರಡು ದಿನ, ಒಂದು ತಿಂಗಳು, ಎರಡು ತಿಂಗಳು, ಅಥವಾ ಬದುಕಿರುವವರೆಗು ಆಹಾರ ಸ್ವೀಕರಿಸುವುದಿಲ್ಲವೆಂದು ವ್ರತ ತೊಡುವುದು. (೨) ಊನೋದರೀ ತಪಸ್ಸು—ಹೊಟ್ಟೆ ತುಂಬುವುದಕ್ಕೆ ಎಷ್ಟು ಬೇಕೋ ಅದಕ್ಕಿಂತ ಕೊಂಚ ಕಡಿಮೆ ತಿನ್ನುವುದು. (೩) ವೃತ್ತಿಸಂಕ್ಷೇಪ ತಪಸ್ಸು—ಸಂಪೂರ್ಣವಾಗಿ ಅನಶನವನ್ನು ಆಚರಿಸದಿದ್ದರೆ; ಇಷ್ಟೇ ವಸ್ತುಗಳನ್ನು ತಿನ್ನುತ್ತೇನೆ, ಇಂತಹ ಸ್ಥಳಗಳಲ್ಲಿ ಮಾತ್ರ ಆಹಾರ ಸ್ವೀಕರಿಸುತ್ತೇನೆ, ಇಂತಹ ವೇಳೆಯಲ್ಲಿ ಮಾತ್ರ ಊಟಮಾಡುತ್ತೇನೆ, ಈ ಭಾವ[1]ದವರು ಕೊಟ್ಟುದನ್ನು ಮಾತ್ರ ತಿನ್ನುತ್ತೇನೆ—ಎಂದು ದ್ರವ್ಯ, ಕ್ಷೇತ್ರ, ಕಾಲ, ಭಾವಗಳನ್ನು ಆಶ್ರಯಿಸಿ ತನ್ನ ಭಿಕ್ಷಾವೃತ್ತಿಯನ್ನು ಸಂಕೋಚಪಡಿಸುವುದು. (೪) ರಸತ್ಯಾಗ ತಪಸ್ಸು—ತನಗೆ ಬಹು ಇಷ್ಟವಾದ ರಸವನ್ನು ತಿನ್ನದೆ ಬಿಡುವುದು. (೫) ಕಾಯಕ್ಲೇಶ ತಪಸ್ಸು—ಬಿಸಿಲಿನಲ್ಲಿ ಕಾದ ಕಲ್ಲಿನ ಮೇಲೆ, ಚಳಿ ಮಳೆಗಳಲ್ಲಿ ಮರದ ಕೆಳಗೆ ಧ್ಯಾನಮಾಡುತ್ತ ದೇಹವನ್ನು ದಂಡಿಸುವುದು; ತಲೆಯ ಕೂದಲನ್ನು ಕೈಯಾರೆ ಕೀಳುವುದು, ಇತ್ಯಾದಿ. (೬) ಸಂಲೀನತೆ—ಇಂದ್ರಿಯಗಳನ್ನು ನಿಗ್ರಹಿಸಿ, ಕಷಾಯಗಳನ್ನು ಅದುಮಿ, ಯೋಗವನ್ನು ತಡೆದು, ಏಕಾಂತವಾಗಿ ವಾಸಿಸುವುದು.

---

1. ಭಿಕ್ಷೆ ನೀಡಿದವರು ನಿಂತ, ಕುಳಿತ ಭಂಗಿ. ಮನೆಯ ಹೊಸಲಿನಾಚೆ ನಿಂತವರಿಂದ, ಸ್ವೀಕರಿಸುವುದು, ಮಕ್ಕಳು ಎತ್ತಿಕೊಂಡವರಿಂದ ಸ್ವೀಕರಿಸದಿರುವುದು ಇತ್ಯಾದಿ.

**ಅಭ್ಯಂತರ ತಪಸ್ಸು** ಆರು: (೧) ಪ್ರಾಯಶ್ಚಿತ್ತ—ತಾವು ಮಾಡಿದ ಪಾಪಗಳನ್ನು ಹಿರಿಯರೆದುರು ಒಪ್ಪಿಕೊಂಡು, ಕ್ಷಮೆ ಬೇಡಿ, ಅವರು ವಿಧಿಸಿದ ಶಿಕ್ಷೆಯನ್ನು ಸ್ವೀಕರಿಸಿ, ಪರಿಹಾರಮಾಡಿಕೊಳ್ಳುವುದು. (೨) ವಿನಯ—ಜ್ಞಾನ ದರ್ಶನ ಚಾರಿತ್ರಗಳಲ್ಲಿ ತಮಗಿಂತ ಮುಂದುವರಿದವರಿಗೆ ಕಾಯಾ ವಾಚಾ ಮನಸಾ ವಿನೀತರಾಗಿ ವಂದಿಸುವುದು. (೩) ವೈಯಾವೃತ್ತಿ—ಶ್ರಮಣರಿಗೆ, ದೀನರಿಗೆ, ಅನಾಥರಿಗೆ ಅನ್ನ ನೀರು ಬಟ್ಟೆ ಆಶ್ರಯಗಳನ್ನು ಕೊಟ್ಟು ಸೇವಿಸುವುದು. (೪) ಸ್ವಾಧ್ಯಾಯ—ತಮ್ಮ ಆಗಮಗ್ರಂಥಗಳನ್ನು ಓದಿಸಿ, ಕೇಳಿ, ಓದಿ, ತಿಳಿದು ಮನನಮಾಡುವುದು. (೫) ಧ್ಯಾನ—ಸತ್ತವರಿಗಾಗಿ ಸದಾ ಗೋಳಾಡಿ ಅದನ್ನೇ ನೆನೆಯುತ್ತಿರುವುದು 'ಆರ್ತಧ್ಯಾನ'; ತಮಗೆ ಪರರಿಂದ ಆದ ಉಪಸರ್ಗಗಳನ್ನು ಮರೆಯದೆ, ಅದನ್ನೇ ರಾಗದ್ವೇಷಗಳಿಂದ ನೆನೆಯುತ್ತಿರುವುದು 'ರೌದ್ರಧ್ಯಾನ'; ಈ ಎರಡೂ ಧ್ಯಾನಗಳು ಕೆಟ್ಟವು. ಅದು ಬಿಟ್ಟು, ಧರ್ಮವಿಷಯಗಳನ್ನೂ ಆಗಮದ ಉಪದೇಶವನ್ನೂ ಸದಾ ನೆನೆಯುವುದು 'ಧರ್ಮಧ್ಯಾನ'; ಧರ್ಮಧ್ಯಾನವನ್ನು ಪೂರೈಸಿ, ಜೀವವು ಮುಕ್ತವಾಗುವುದನ್ನೇ ಕುರಿತು ಧ್ಯಾನಿಸುವುದು **'ಶುಕ್ಲಧ್ಯಾನ'**. ಈ ಎರಡೂ ಧ್ಯಾನಗಳಿಂದ ಜೀವಕ್ಕೆ ಮೇಲು. (೬) **ಉತ್ಸರ್ಗ**—ದೇಹವನ್ನೂ ಅದರ ಬಯಕೆಗಳನ್ನೂ ಗಮನಿಸದೆ, ಮಡಿಯುವವರೆಗು ಅವುಗಳನ್ನು ಉಪೇಕ್ಷೆಯಿಂದ ಕಾಣುವುದು.

ಈ ಹನ್ನೆರಡು ತೆರದ ತಪಸ್ಸಿನಿಂದ ಅಪಕ್ವವಾದ ಹಳೆಯ ಕರ್ಮವು ಬೇಗ ಪಕ್ವವಾಗಿ ಜೀವದಿಂದ ಕಳಚಿಬೀಳುವುದು.

## ಮೋಕ್ಷ

ಜೀವವು ಕರ್ಮದ ಕೊಳೆಯನ್ನೆಲ್ಲ ಕಳೆದುಕೊಂಡು, ತನ್ನ ಶುದ್ಧವಾದ ಸಹಜಸ್ಥಿತಿಗೆ ಬರುವುದು **ಮೋಕ್ಷ**ವೆಂಬ ಒಂಬತ್ತನೆಯ ಹಾಗೂ ಕೊನೆಯ ತತ್ವ. ಮೋಕ್ಷವನ್ನು ಪಡೆದ ಜೀವಕ್ಕೆ ಸಂಸಾರದಲ್ಲಿ ಎಂದೂ ಎಡೆಯಿಲ್ಲ. ಆಗ ಜೀವವು ಅಜೀವದಿಂದ ಬೇರಾಗುವುದು; ಅದರ ನಾಲ್ಕು ಅನಂತ ಗುಣಗಳೂ ಸ್ಪಷ್ಟವಾಗುವುವು.

## ತೀರ್ಥ—ತೀರ್ಥಂಕರ

ಮೇಲೆ ಹೇಳಿದ ನವತತ್ವವನ್ನು ಜ್ಞಾನ ದರ್ಶನ ಚಾರಿತ್ರಗಳಿಂದ ಅನುಸರಿಸುವವರೆಲ್ಲ ಜೈನರು. ಅವರಲ್ಲಿ ಸಂನ್ಯಾಸಿಗಳ ಚಾರಿತ್ರ ಬಹು

ಕಠಿಣವಾದುದು, ತೀವ್ರವಾದುದು. ಗೃಹಸ್ಥರ ಚಾರಿತ್ರ ಅದಕ್ಕಿಂತ ಸುಲಭವಾದುದು, ಮಂದವಾದುದು.

ಜೈನ ಗೃಹಸ್ಥರಲ್ಲಿ ಗಂಡಸರನ್ನು **ಉಪಾಸಕ,** ಶ್ರಾವಕ ಎಂದೂ, ಹೆಂಗಸರನ್ನು ಉಪಾಸಿಕೆ, ಶ್ರಾವಿಕೆ ಎಂದೂ ಕರೆಯುವರು. ಮನೆ ಬಿಟ್ಟು ಸಂನ್ಯಾಸಿಗಳಾದ ಗಂಡಸರನ್ನು **ನಿರ್ಗ್ರಂಥ, ಸಾಧು** ಎಂದೂ, ಹೆಂಗಸರನ್ನು ನಿರ್ಗ್ರಂಥೀ, ಸಾಧ್ವೀ ಎಂದೂ ಕರೆಯುವರು. ಹೀಗೆ ಶ್ರಾವಕ, ಶ್ರಾವಿಕೆ, ಸಾಧು, ಸಾಧ್ವೀ ಎಂದು ನಾಲ್ಕು ತೆರನಾದ ಜೈನ ಸಂಘವನ್ನು ನಾಲ್ಕು **ತೀರ್ಥ**ಗಳು ಎಂದು ಕರೆಯುತ್ತಾರೆ. ಈ ತೀರ್ಥಗಳನ್ನು ಮಾಡಿದವರು **ತೀರ್ಥಕರ**ರೆನ್ನಿಸಿಕೊಳ್ಳುತ್ತಾರೆ. ಸಂಸಾರವನ್ನು ಉತ್ತರಿಸುವುದಕ್ಕೆ ನೆರವಾಗುವ ಅನೇಕ ದರ್ಶನಗಳಲ್ಲಿ ಒಂದಾದ ಮೇಲೆ ಹೇಳಿದ ಜೈನ ದರ್ಶನಕ್ಕೂ **ತೀರ್ಥ** ಎಂಬ ಹೆಸರು ಸಲ್ಲುವುದು. ಈ ದರ್ಶನಕ್ಕೆ ಕರ್ತರಾದುದರಿಂದಲೂ ಅವರು **ತೀರ್ಥಕರ**ರೆನ್ನಿಸಿಕೊಳ್ಳುವರು.

## ಜೈನ ಗೃಹಸ್ಥರು

ಇವರಿಗೆ ಜೈನ ಧರ್ಮದಲ್ಲಿ ಶ್ರದ್ಧೆಯಿರಬೇಕು.

ಇವರು ಹನ್ನೆರಡು ವ್ರತಗಳನ್ನು ಆಚರಿಸಬೇಕು:—(೧–೫) ಹಿಂಸೆ ಮಾಡಕೂಡದು; ಸುಳ್ಳಾಡಕೂಡದು; ಪರರ ವಸ್ತುವನ್ನು ಕದಿಯಕೂಡದು; ಪರಸ್ತ್ರೀ ಪರಪುರುಷರ ಸಂಗ ಮಾಡಕೂಡದು; ತನಗೆ ಬೇಕಾದುದಕ್ಕಿಂತ ಹೆಚ್ಚು ವಸ್ತುಗಳನ್ನು ಸಂಗ್ರಹಿಸಕೂಡದು; ಇವು ಐದು ಅಣುವ್ರತಗಳು. (೬–೮) ತನ್ನ ಪ್ರತಿದಿನದ ಕೆಲಸ, ಊಟ, ಅನುಭೋಗಗಳನ್ನು ಮಿತಪಡಿಸಿಕೊಳ್ಳುವ ಮೂರು ಗುಣವ್ರತಗಳು. (೯–೧೨) ಮೇಲಿನ ಐದು ವ್ರತಗಳನ್ನು ಸಾಧಿಸಲು ಸಹಾಯಕವಾಗುವ ನಾಲ್ಕು ಶಿಕ್ಷಾವ್ರತಗಳು.

ಉಪಾಸಕರು ತಮ್ಮ ಮನಸ್ಸು ಚಿತ್ತಗಳ ಶುದ್ಧಿ ಸಮಾಧಾನಗಳಿಗಾಗಿ ಪ್ರತಿದಿನ ಮೂರು ಬಾರಿ ಆತ್ಮಧ್ಯಾನದಲ್ಲಿ ನಲುವತ್ತೆರಡು ನಿಮಿಷ ನಿಲ್ಲಬೇಕು. ಈ ಶಿಕ್ಷೆಗೆ **ಸಾಮಾಯಿಕ**ವೆಂದು ಹೆಸರು.

ಉಪಾಸಕರು ಹದಿನಾಲ್ಕು ದಿನಗಳಿಗೊಮ್ಮೆ ಉಪವಾಸ ಮಾಡಬೇಕು. ಇದೆ **ಪೋಷಧ.**

ಉಪಾಸಕರು ಹೊಸ ಕಾಯಿಪಲ್ಯಗಳನ್ನು ತಿನ್ನಕೂಡದು. ಅವು ಚಿತ್ತವಂತವಾದುವು, ಅವುಗಳಲ್ಲಿ ಜೀವವುಂಟು.

ಉಪಾಸಕರು ರಾತ್ರಿ ಊಟಮಾಡಕೂಡದು. ಏಕೆಂದರೆ, ಅನೇಕ ಜೀವಿಗಳು ರಾತ್ರಿಯಲ್ಲಿ ಕಣ್ಣಿಗೆ ಕಾಣದೆ ಆಹಾರದೊಂದಿಗೆ ಹೋದಾವು.

ಉಪಾಸಕರು ಬ್ರಹ್ಮಚರ್ಯವನ್ನು ಆಚರಿಸಬೇಕು; ಎಂದರೆ, ಸ್ವಸ್ತ್ರೀ ಸಂಗದಲ್ಲಿ ಮಿತವಾಗಿ ರಮಿಸಬೇಕು.

ಉಪಾಸಕರು **ಆರಂಭ**ಗಳನ್ನು ತ್ಯಜಿಸಬೇಕು; ಎಂದರೆ, ಜೀವ ಹಿಂಸೆಯಾಗುವ ಐಹಿಕವೃತ್ತಿಗಳಿಂದ ಜೀವನೋಪಾಯವನ್ನು ಕಲ್ಪಿಸ ಕೂಡದು.

ಈ ಮೇಲಿನವುಗಳನ್ನು ನಡೆಸಿ, ಉಪಾಸಕನು ಸಾಧುವಾಗಲು ಉದ್ದೇಶಿಸಿದರೆ, ಪರಿಗ್ರಹತ್ಯಾಗ, ಅನುಮತಿತ್ಯಾಗ, ಉದ್ದಿಷ್ಟತ್ಯಾಗ ಎಂಬ ಮತ್ತೂ ಮೂರು ವ್ರತಗಳನ್ನು ಕೈಕೊಳ್ಳುವನು. ಅಲ್ಲಿಂದ ಮುಂದೆ ಅವನು **ಸಾಧು**ವೆನ್ನಿಸಿಕೊಳ್ಳುವನು.

## ಪಂಚ ಪರಮೇಶ್ವರ

ಜೈನರಲ್ಲಿ ಮನೆಬಿಟ್ಟು ಪರಿವ್ರಜಿಸಿ ಅನಾಗಾರ್ಯರಾದವರನ್ನು ಅವರವರ ಸಾಧನೆ ಸಿದ್ಧಿಗಳಿಗೆ ಉಚಿತವಾಗಿ **ಸಾಧು, ಉಪಾಧ್ಯಾಯ, ಆಚಾರ್ಯ, ಸಿದ್ಧ, ಅರ್ಹಂತ** ಎಂದು ಐದು ತೆರನಾಗಿ ವಿಂಗಡಿಸಿ, ಅವರನ್ನು ಪಂಚ ಪರಮೇಷ್ಠಿಗಳೆಂದು, ಪಂಚ ಪರಮೇಶ್ವರರೆಂದು, ಜೈನರು ಪೂಜಿಸು ವರು.

ಇವರಲ್ಲಿ **ಸಾಧು**ಗಳನ್ನು **ಮುನಿ**ಗಳೆಂದೂ ಕರೆಯುವರು. ಈ ಮುನಿಗಳು ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ **ಪಂಚಮಹಾವ್ರತ**ಗಳನ್ನೂ ಐದು ಸಮಿತಿಗಳನ್ನೂ ಮೂರು ಗುಪ್ತಿಗಳನ್ನೂ ಪಾಲಿಸಿ; ರಾತ್ರಿಯೂಟವನ್ನು ಬಿಟ್ಟು; ಆರು ತೆರದ ಜೀವನಿಕಾಯಗಳನ್ನೂ ಕಾಪಾಡಿ; ಕ್ರೋಧಾದಿ ಕಷಾಯಗಳನ್ನು ಬಿಟ್ಟು, ಕ್ಷಮಾದಿ ಉದಾತ್ತ ಗುಣಗಳನ್ನು ಬೆಳೆಸಿ; ಪರೀಷಹ ಉಪಸರ್ಗಗಳನ್ನು ಸಮತೆಯಿಂದ ಜೀವ ವಿರುವತನಕ ಭಾವಿಸುವರು.

ಸಾಧುತ್ವದ ಮೇಲಿನ ಮೆಟ್ಟಲು ಹತ್ತಿದವನು **ಉಪಾಧ್ಯಾಯ**ನೆನ್ನಿಸಿ ಕೊಳ್ಳುವನು. ಸಾಧುವು ಜಿನಾಗಮವನ್ನು ಅರಗಿಸಿಕೊಂಡು ಅದನ್ನು ತನ್ನ ಶಿಷ್ಯರಿಗೆ ಹೇಳುವಷ್ಟು ಪಾಂಡಿತ್ಯ ಪಡೆದಾಗ ಅವನು ಉಪಾಧ್ಯಾಯ ನಾಗುವನು.

ಉಪಾಧ್ಯಾಯನ ಮೇಲಿನ ಮೆಟ್ಟಲು **ಆಚಾರ್ಯ**ನದು. ಆಚಾರ್ಯನು ಪಂಚೇಂದ್ರಿಯಗಳನ್ನು ಗೋಪನಮಾಡುವನು; ಒಂಬತ್ತು ರೀತಿ*ಯಲ್ಲಿ ಬ್ರಹ್ಮಚರ್ಯವನ್ನು ಪಾಲಿಸುವನು; ಮೂರು ಗುಪ್ತಿಯನ್ನು ಕಾಪಾಡುವನು; ನಾಲ್ಕು ಕಷಾಯವನ್ನು ಕಳೆಯುವನು; ಪಂಚಮಹಾವ್ರತವನ್ನು ಪಾಲಿಸುವನು; ಪಂಚ ಚಾರಿತ್ರವನ್ನು ಆಚರಿಸುವನು; ಐದು ಸಮಿತಿಗಳನ್ನು ನಡೆಸುವನು; ಹೀಗೆ ಮೂವತ್ತಾರು ಗುಣಗಳಿಂದ ಕೂಡಿದವನಾಗುವನು.

ಈ ರೀತಿಯಲ್ಲಿ ನಿರ್ವಾಣ ಮಾರ್ಗವನ್ನು ನಡೆದವರು ತಮ್ಮ ಎಂಟು ತೆರದ ಕರ್ಮಗಳಲ್ಲಿ ನಾಲ್ಕು ಘಾತಿ ಕರ್ಮಗಳನ್ನು ನಾಶಮಾಡಿ ಜೀವಿಸಿರುವಾಗಲೆ ಮುಕ್ತಿ ಪಡೆಯುವರು; ಇವರನ್ನು **ಸಯೋಗ ಕೇವಲಿ**ಗಳೆಂದು ಕರೆಯುವರು. ಇವರು ಉಳಿದ ನಾಲ್ಕು ಅಘಾತಿ ಕರ್ಮಗಳನ್ನೂ ನಾಶಮಾಡಿ, ಮರಣಹೊಂದಿ, ದೇಹವನ್ನು ತ್ಯಜಿಸಿ, ಲೋಕಾಗ್ರದಲ್ಲಿರುವ ಸಿದ್ಧಿಗತಿಗೆ ಹೋಗುವರು; ಅಮೃತರಾಗುವರು. ಅಲ್ಲಿಗೆ ಹೋಗಿ **ಸಿದ್ಧ**ರೆಂದೆನಿಸಿಕೊಳ್ಳುವರು. ಇವರನ್ನು **ಅಯೋಗ ಕೇವಲಿ**ಗಳೆಂದೂ ಹೇಳುವರು.

ಈ ರೀತಿಯಲ್ಲಿ ನಿರ್ವಾಣವನ್ನು, ಕೇವಲವನ್ನು ಪಡೆದು 'ಇನ್ನೂ ಅಘಾತಿಕರ್ಮಗಳು ಕ್ಷಯವಾಗದೆ ದೇಹದೊಂದಿಗೆ ಇರುವವರೆಲ್ಲ **ಅರ್ಹಂತ**ರು. ಅಘಾತಿಕರ್ಮಗಳನ್ನು ಕ್ಷಯಿಸಿ ದೇಹವನ್ನು ಬಿಟ್ಟು ಅಪುನರಾವರ್ತಿತವಾದ ಸಿದ್ಧಿಗೆ ಹೋದವರೆಲ್ಲ **ಸಿದ್ಧ**ರು. ಈ ಸಿದ್ಧರಲ್ಲಿ ಎರಡು ತೆರ: (೧) ತಮ್ಮ ಸಿದ್ಧಿಯನ್ನು ಮಾತ್ರ ತಾವು ಸಾಧಿಸಿಕೊಂಡವರು ಸಾಮಾನ್ಯ ಸಿದ್ಧರು. (೨) ತಾವು ಸಿದ್ಧಿಪಡೆದುದು ಮಾತ್ರವಲ್ಲದೆ, ಇತರರಿಗೂ ಸಿದ್ಧಿಯ ಮಾರ್ಗವನ್ನು ಬೋಧಿಸಿದವರು ತೀರ್ಥಂಕರ ಸಿದ್ಧರು.

[ಇಂತಹ ತೀರ್ಥಂಕರರು ಪ್ರತಿ ಉತ್ಸರ್ಪಿಣಿ ಅವಸರ್ಪಿಣಿಗಳಲ್ಲಿ ಇಪ್ಪತ್ತನಾಲ್ಕರ ಸಂಖ್ಯೆಯಲ್ಲಿ ಅವತರಿಸಿ ಬರುವರು. ಸದ್ಯದ ಅವಸರ್ಪಿಣಿಯಲ್ಲಿ ಲೋಕಕಲ್ಯಾಣಕ್ಕಾಗಿ ಅವತಾರಮಾಡಿದ ಇಪ್ಪತ್ತುನಾಲ್ವರಲ್ಲಿ ಋಷಭನಾಥನು ಆದಿ ತೀರ್ಥಕರನು; ನೇಮಿನಾಥನು ಇಪ್ಪತ್ತೆರಡನೆಯವನು; ಮಹಾವೀರನೆನಿಸಿದ ವರ್ಧಮಾನನು ಕಡೆಯವನು.]

---

* ದೇವ, ಮಾನುಷ, ತಿರ್ಯಕ್ಕುಗಳೊಡನೆ ಅಬ್ರಹ್ಮಚರ್ಯವಾಚರಿಸುವುದಿಲ್ಲ. ಮನಸ್ಸು, ಮಾತು, ಮೈಗಳಿಂದ ಅಬ್ರಹ್ಮಚರ್ಯವಾಚರಿಸುವುದಿಲ್ಲ. ತಾನು ಆಚರಿಸುವುದಿಲ್ಲ, ಇತರರನ್ನು ಆಚರಿಸುವಂತೆ ಪ್ರೇರಿಸುವುದಿಲ್ಲ, ಇತರರು ಆಚರಿಸಿದರೆ ಅದನ್ನು ಮೆಚ್ಚುವುದಿಲ್ಲ.

## ಪಂಚ ನಮುಸ್ಕಾರ

ಈ ಮೇಲಿನ ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸಾಧು ಎಂಬ ಪಂಚ ಪರಮೇಶ್ವರರನ್ನು ಕುರಿತ

**ನಮೋ ಅರಹಂತಾಣಂ, ನಮೋ ಸಿದ್ಧಾಣಂ,**
**ನಮೋ ಆಯಾರಿಯಾಣಂ, ನಮೋ ಉವಜ್ಝಾಯಾಣಂ**
**ನಮೋ ಲೋಯೇ ಸಬ್ಬ ಸಾಹೂಣಂ**

ಎಂಬ ಪಂಚ ನಮಸ್ಕಾರವು, ಈ ಪುಸ್ತಕದ ಮೊದಲಲ್ಲಿ ಹೇಳಿದಂತೆ, ಸರ್ವ ಮಂಗಲಗಳಲ್ಲಿ ಮೊದಲ ಮಂಗಲವು.

# ೧. ನಾಮಪದ ಸೂಚಿ

# ಪದ ಅರ್ಥ ಕೋಶ

(ಕೆಳಗೆ ಕೊಟ್ಟಿರುವ ಪದಗಳಲ್ಲಿ, ಮೇಲಿಂದ ಮೇಲೆ ಬರುವವನ್ನು ಅನುಬಂಧದಲ್ಲಿ ವಿವರಿಸಿದೆ; ಪದದ ಎದುರು ಅನುಬಂಧದ ಆ ಆ ಪುಟಗಳನ್ನು ಸೂಚಿಸಿದೆ.)

ಅಂತಕರ–ಜೀವವು ಚತುರ್ಗತಿಗಳ ಸಂಸಾರದಲ್ಲಿ ಬಿದ್ದು ಓಡಿಯಾಡುವುದನ್ನು ಕೊನೆಮಾಡಿದವನು; ಎಂಟು ಕರ್ಮಗಳನ್ನು ನಾಶಮಾಡಿದವನು; 'ಸಿದ್ಧ'.

ಅಕಿಂಚನ–ತನ್ನದಾಗಿ ಯಾವ ಸ್ವತ್ತೂ ಇಲ್ಲದವನು. 118

ಅಕ್ರಿಯವಾದಿ–'ಜೀವ ಕ್ಷಣಕ್ಷಣಕ್ಕೂ ಬದಲಾಯಿಸುತ್ತದೆ. ಆದರಿಂದ ಜೀವವು ತಾನು ಮಾಡಿದ ಕರ್ಮದ ಫಲವನ್ನು ತಾನು ಅನುಭವಿಸುವುದಿಲ್ಲ' ಎಂಬವರು.

ಅಘಾತಿ (ಕರ್ಮ)–113.

ಅಚೇಲಕ–ಬಟ್ಟೆಯಿಲ್ಲದೆ ಬೆತ್ತಲೆಯಾದವನು, ನಗ್ನ.

ಅಜ್ಞಾನವಾದಿ–'ಜ್ಞಾನ ಬೇಡ. ಮುಕ್ತಿಗೆ ತಪಸ್ಸೊಂದೇ ಸಾಕು' ಎಂಬವರು.

ಅಜೀವ–ಎರಡನೆ ತತ್ವ, 107–109.

ಅನಾಗಾರ್ಯ–ಮನೆಯಿಲ್ಲದವನು, ಸಂನ್ಯಾಸಿ.

ಅನಾಸ್ರವ–'ಆಸ್ರವ'ಗಳು ಇಲ್ಲದವನು.

ಅನುತ್ತರ–ಪರಮ ಶ್ರೇಷ್ಠ.

ಅಪ್ರಮತ್ತ–ಜಾಗರೂಕನಾಗಿ ಎಚ್ಚತ್ತಿರುವವನು.

ಅಪ್‌ಕಾಯ–107.

ಅಭಿಗ್ರಹ–ದೃಢವಾದ ಸಂಕಲ್ಪ.

ಅಭಿನಿರ್ವೃತ–ಸಂಪೂರ್ಣ 'ನಿರ್ವಾಣ' ಪಡೆದವನು.

ಅಭಿನಿಷ್ಕ್ರಮಣ–ಸಂನ್ಯಾಸಿಯಾಗುವುದಕ್ಕಾಗಿ ಮನೆಬಿಟ್ಟು ನಡೆಯುವಿಕೆ.

ಅವಧಿ(ಜ್ಞಾನ)–104–5.

ಅವಸರ್ಪಿಣಿ–109.

ಅಸಮಾಧಿ–ಅಶಾಂತಿ.

ಅಸುರ–ನರಕದ ಜೀವಿ.

ಅರ್ಹ–'ಅರ್ಹಂತ'.

ಅರ್ಹಂತ–123.

ಆಚಾರ್ಯ–123.

ಆರ್ಜವ–'ಶ್ರಮಣಧರ್ಮ', 117.

ಆತ್ಮ–'ಜೀವ' ನೋಡಿ.

ಆದಾನ ಐಹಿಕ ವಸ್ತುಗಳ ಸ್ವೀಕಾರ.

ಆದಾನನಿಕ್ಷೇಪಣಾ (ಸಮಿತಿ)–116.

ಆದಿಕರ–ಕರ್ಮಗಳನ್ನು ಕ್ಷಯಿಸಿ ಮುಕ್ತಿ ಪಡೆದವರು ಅನುಭವಿಸುವ ಸ್ಥಿತಿಗೆ ಮೊದಲು ಉಂಟೇ ಹೊರತು ಕೊನೆಯೆಂಬುವುದಿಲ್ಲ;

ತೀರ್ಥಕರ–ತೀರ್ಥವನ್ನು ಮಾಡುವವನು, 121.
ತೀರ್ಥಂಕರ–'ತೀರ್ಥಕರ'.
ತುಷ್ಟಿ–ನಿರ್ಲೋಭತೆ, 117.
ತೇಜಃಕಾಯ–107.

ದರ್ಶನ–ಮೊದಲ ರತ್ನ, 104.
ದ್ವಾದಶಾಂಗ–ಹನ್ನೆರಡು ಅಂಗಗಳಿಂದ ಕೂಡಿದ ಜೈನರ ಆಗಮ.
ದ್ಯುತಿ–ವರ್ಚಸ್ಸು.
ದುಃಷಮಸುಷಮ–ಕಾಲ, 109.
ದೇವ–ಗತಿ, 103.
ದ್ವೇಷ–111.

ಧರ್ಮ–ಸಂಸಾರದಿಂದ ಬಿಡುಗಡೆಯಾಗಬೇಕಾದರೆ ನಡೆಸಬೇಕಾದ ಮೈ ಮಾತು ಮನಸ್ಸುಗಳ ಕೆಲಸಗಳು.
ಧ್ಯಾನ–120.
ಧೀರ–'ಜ್ಞಾನ, ದರ್ಶನ, ಚಾರಿತ್ರ'ಗಳಲ್ಲಿ ಪಂಡಿತನಾದವನು.
ಧೃತಿ–ಜ್ಞಾನ ದರ್ಶನ ಚಾರಿತ್ರಗಳನ್ನು ಧರಿಸುವ ಮೈ ಮಾತು ಮನಸ್ಸುಗಳ ಶಕ್ತಿ.

ನಾಮ (ಕರ್ಮ)–113.
ನಿರ್ಗ್ರಂಥ–'ಗ್ರಂಥ'ಗಳನ್ನು ಹೋಗಲಾಡಿಸಿಕೊಂಡವನು, ಜೈನ 'ಸಾಧು'.
ನಿರ್ಜರಾ–ಎಂಟನೆ ತತ್ವ, 119–20.
ನಿರ್ವಾಣ–'ಕೇವಲ' ಜ್ಞಾನ; 'ಘಾತಿಕರ್ಮ'ಗಳ ಕ್ಷಯ.

ಪನಕ–ಪಾಚಿ ಮುಂತಾದ್ದು.
ಪರ್ಯಂಕಾಸನ ಕೈಯಲ್ಲಿ ಕೈ ಮಲಗಿಸಿ, ಚಕ್ಕಳ ಬಕ್ಕಳ ಹಾಕಿ ಕೂಡುವುದು.
ಪರಿಗ್ರಹ–111.
ಪರಿನಿರ್ವಾಣ–'ಕೇವಲಿ'ಯ ಮರಣ; 'ಘಾತಿ' 'ಅಘಾತಿ' ಕರ್ಮಗಳೆಲ್ಲದರ ನಾಶ.
ಪರಿನಿಷ್ಕ್ರಮಣ–'ಅಭಿನಿಷ್ಕ್ರಮಣ.'
ಪರಿವ್ರಜಿಸು–ಮನೆಬಿಟ್ಟು ಸಂನ್ಯಾಸಿಯಾಗಿ ಗ್ರಾಮದಿಂದ ಗ್ರಾಮಕ್ಕೆ ತಿರುಗು.
ಪರೀಷಹ–117.
ಪಂಚಮಹಾವ್ರತ–122.
ಪ್ರತಿಕ್ರಮಣ–ಮಾಡಿದ ಪಾಪಗಳನ್ನು ನೆನೆದು, ಅವುಗಳಿಗಾಗಿ ಪಶ್ಚಾತ್ತಾಪಪಡುವುದು.
ಪ್ರತಿಗ್ರಹ–'ಪರಿಗ್ರಹ'.
ಪ್ರಪತ್ತಿ–ಪ್ರಾಪ್ತಿ, ಗುರಿ.
ಪ್ರಭು–'ತೀರ್ಥಂಕರ', ಆಪ್ತ, 'ಜಿನ'.
ಪ್ರವ್ರಜ್ಯ–ಸಂನ್ಯಾಸ.
ಪಾಪ–ನಾಲ್ಕನೆ ತತ್ವ, 111–2.
ಪಾರ–ಆಚೆಯ ದಡ: 'ಕೇವಲ'.
ಪ್ರಾಯಶ್ಚಿತ್ತ–120.
ಪುಣ್ಯ–ಮೂರನೆ ತತ್ವ, 111.
ಪುದ್ಗಲ–ಪಂಚೇಂದ್ರಿಯಗಳಿಗೆ ಗೋಚರವಾಗುವ ವಸ್ತು, 107–8.
ಪೃಥ್ವೀಕಾಯ–107.
ಪೋಷಧ–121.

ಬದರಚೂರ್ಣ–ಬದರವೆಂಬ ಕಾಯಿಯ ಪುಡಿ.
ಬಹುಶ್ರುತ–ಪಂಡಿತ, ಜ್ಞಾನಿ.
ಬಂಧ–ಆರನೆ ತತ್ವ, 115.
ಬ್ರಹ್ಮ–'ಸಿದ್ಧಗತಿ', 105.
ಬ್ರಹ್ಮಚರ್ಯ–ಅಬ್ರಹ್ಮಚರ್ಯವಲ್ಲದ್ದು, 111.
ಬಾಲ–'ಧೀರ'ನಲ್ಲದವನು.
ಬುದ್ಧ–'ಕೇವಲಿ'.
ಬೋಧಿ 'ಕೇವಲ' ಜ್ಞಾನ.

ಭಗವಂತ–ಸರ್ವಭಾಗ್ಯಗಳುಳ್ಳ ಪ್ರಭು', 'ಜಿನ'.
ಭದಂತ ಪೂಜ್ಯ.
ಭವ–ಸಂಸಾರದಲ್ಲಿ ಜನಿಸುವಿಕೆ.
ಭವನಪತಿ–ನರಕದ ಜೀವಿ, 103.
ಭಾವನೆ–118.
ಭಾಷಾ (ಸಮಿತಿ)–116.
ಭಿಕ್ಷು–ಜೈನ 'ಸಾಧು'.

